ಪ್ರತಿಭಾ ಗ್ರಂಥಮಾಲಾ, ಧಾರವಾಡ. (ಬಿಡಿಮುತ್ತು ೧)



# ನಾಳಿನ ಭಾರತೀಯ ತರುಣರು

ಲೇಖಕರು:

ಶ್ರೀ ಭಟಕಳ ಸದಾನಂದರಾಯರು, ಮುಂಬಯಿ.



ಅನುವಾದಕರು:

ಶ್ರೀ ಬಿ. ವೆಂಕಟೇಶ ಶಾಸ್ತ್ರಿಗಳು.



ನವೆಂಬರ್ ೧೯೪೭

ಬೆಲೆ ಒಂದು ರೂಪಾಯಿ

ಪ್ರಕಾಶಕರು :
ಬಾಲಚಂದ್ರ ಘಾಣೇಕರ,
ಸಮಾಜ ಪುಸ್ತಕಾಲಯ,
ಧಾರವಾಡ.

# ಪ್ರತಿಭಾ ಗ್ರಂಥಮಾಲೆ, ಧಾರವಾಡ

ಸಂಪಾದಕರು: **ಬಾಲಚಂದ್ರ ಘಾಣೇಕರ.**

---

**ವರ್ಷದಲ್ಲಿ ಎಂಟು ಉತ್ತಮ ಪುಸ್ತಕಗಳು.**

ವಾರ್ಷಿಕ ಚಂದಾ (ಅಂಚೆ ರಜಿಸ್ಟರ್ ಸೇರಿ) ೯ ರೂ. ಮಾತ್ರ

ವರ್ಷದಲ್ಲಿ ಸುಮಾರು ೧೨-೧೩ ರೂ. ಬೆಲೆಯ ಪುಸ್ತಕಗಳು ಪ್ರಕಟವಾಗುತ್ತವೆ. ಇದರಲ್ಲಿ ಕಾದಂಬರಿಗಳೇ ಹೆಚ್ಚು.

ಜನೆವರಿ, ಎಪ್ರಿಲ್, ಜುಲೈ, ಅಕ್ಟೋಬರ ಮೊದಲನೇ ತಾರೀಖಿಗೆ-ಸರತಿಗೆ ಎರಡು ಪುಸ್ತಕಗಳಂತೆ ನಾಲ್ಕು ಸಲ ರವಾನಿಸಲಾಗುತ್ತೆ. ( ಜನೆವರಿ ೧೯೪೮-ಐನೇ ವರ್ಷಾರಂಭ )

**ಐದನೇ ವರ್ಷದಲ್ಲಿ ಬರಲಿವೆ !**

| | |
|---|---|
| ಮುಗಿಲ ಮಲ್ಲಿಗೆ ( ಪುರಾಣಿಕರ ಕಾದಂಬರಿ ) | ೨-೮-೦ |
| ಬಾಯಬಂಡಾಯ ( ಬೇಂದ್ರೆ-ನಾಟಕ | ೧-೮-೦ |
| ಕೊಲ್ಗಂಬ ( ಶ್ರೀ. ಗುಡ್ಡಪ್ಪ ಹೊಸಮನಿ ) | ೧-೮-೦ |
| ಪುನರ್ಮಿಲನ ( ಶ್ರೀ. ವಾಡೇದ ) | |
| ಸರೋಜಾ ( ಮಿರ್ಜಿ ಅಣ್ಣಾರಾಯರ ಕಾದಂಬರಿ ) | |
| ಇತ್ಯಾದಿ ಇತ್ಯಾದಿ ............... | |

ಮುದ್ರಕರು :
ಜಿ. ಆರ್. ಪಂಡಿತ
ಕೇಳಕರ ಪ್ರಿಂಟಿಂಗ ಪ್ರೆಸ
ಧಾರವಾಡ.

# ೩ ಯುವಕರ ಅಭಿಲಾಷೆ.

ಪ್ರಪಂಚವು ಒಂದು ಹೊಸ ಧರ್ಮಕ್ಕಾಗಿ ಕಾದಿದೆ. ಮುಖ್ಯವಾಗಿ ವಿಶ್ವದ ತರುಣರು ಒಂದು ನವೀನ ಧರ್ಮವನ್ನೇ ಎದುರುನೋಡುತ್ತಿದ್ದಾರೆ. ಹಳೆಯ ಸಂಸ್ಥೆಗಳೂ, ಹಳೆಯ ಪಕ್ಷಗಳೂ ಬುಡಮಟ್ಟ ನಾಶವಾಗಿವೆ. ಅವುಗಳಿಗೆ ತಕ್ಕ ಪೋಷಣೆ ಸಿಗುತ್ತಿಲ್ಲ. ಯುವಕ ಯುವತಿಯರು ಉಪೇಕ್ಷೆಯಿಂದಲೂ, ತಾಟಸ್ಥ್ಯದಿಂದಲೂ, ಕೂಡಿದವರಾಗಿ ದೂರದೂರವೇ ಇದ್ದಾರೆ. ಆದರೆ ನಾವು ಅವರ ಉಪೇಕ್ಷೆಯನ್ನು ದ್ವೇಷವೆಂದೂ, ಅವರ ತಾಟಸ್ಥ್ಯ ಭಾವವನ್ನು ಸೋಮಾರಿತನವೆಂದೂ ತಪ್ಪಾಗಿ ತಿಳಿಯಬಾರದು. ಬುದ್ಧಿಶಕ್ತಿಯ ದೃಷ್ಟಿಯಿಂದ ನೋಡುವುದಾದರೆ ಅವರು ನಿಜವಾಗಿಯೂ ಜಾಗ್ರತರು. ಆದರೆ ಅವರು ಊಹಾಪ್ರಪಂಚದ ವೀರನಾದಗಳನ್ನೂ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ಸಂಸ್ಕೃತಿ ಇವುಗಳ ವಿಷಯವಾಗಿ ಹರಟೆ ಹೊಡೆಯುವ ವೃದ್ಧರ ಪೊಳ್ಳು ಸಂಸ್ಥೆಗಳನ್ನೂ ತ್ಯಜಿಸಿಬಿಟ್ಟಿದ್ದಾರೆ. ನೆರೆಹೊರೆ ಯುವಕರನ್ನು ಅನ್ಯಾಯವಾಗಿ ಮೋಸಗೊಳಿಸಿ ಪ್ರತಿಫಲಹೊಂದು ವುದಕ್ಕಾಗಿ ಏರ್ಪಟ್ಟ ಸ್ವಾತಂತ್ರ್ಯ ಸಂಸ್ಥೆಯಾದರೆ ಅಂತಹ ಸ್ವಾತಂತ್ರ್ಯವು ಬೇಕಿಲ್ಲ. ಪ್ರಜಾಸತ್ತೆ ಎಂಬುದಕ್ಕೆ "ವೆಸ್ಟ್ ಮಿನಿಸ್ಟರಿನ" ತುಚ್ಛವಾದ ಮೂಂಟೆ ಹೊತ್ತು ವ್ಯಾಪಾರ ಮಾಡುವವರು ಎಂದರ್ಥವಾದರೆ ಅಂತಹ ಪ್ರಜಾಸತ್ತೆಯೂ ಅವರಿಗೆ ಬೇಕಿಲ್ಲ. ನಮ್ಮ ವಿದ್ಯಾಪೀಠಗಳಲ್ಲಿಯೂ, ವಿಶ್ವವಿದ್ಯಾನಿಲಯಗಳಲ್ಲಿಯೂ, ದೊರೆಯುವ ಪ್ರಶಸ್ತಿಗಳೇ ಸಂಸ್ಕೃತಿಯೆನಿಸಿ ಕೊಳ್ಳುವ ಪಕ್ಷದಲ್ಲಿ ಅಂತಹ ಸಂಸ್ಕೃತಿಯು ಅವರಿಗೆ ಬೇಕಿಲ್ಲ. ಮೋಸದು ವ್ಯಾಪಾರಿಗಳೂ, ಪ್ರಚಾರಕರೂ ಸಣ್ಣ ಸಣ್ಣ ಮತ್ತು ಕೀಳುದರ್ಜೆಯ ಅಧಿ ಕಾರಿಗಳೂ, ಅರಚಿಕೊಳ್ಳುವ ಪತ್ರಿಕೋದ್ಯಮಿಗಳೂ ಕೂಟಕಗಳಲ್ಲಿ ಭಾಗ ವಹಿಸುವವರೂ ಮೊದಲಾದವರಿಂದ ಬಿಡುಗಡೆ ಹೊಂದಲು ಪ್ರಯತ್ನಪಡ ತ್ತಾರೆ. ನೈತಿಕ ದೃಷ್ಟಿಯಿಂದ ಪರಿಶುದ್ಧವಾಗಿಯೂ, ಸಾಮಾಜಿಕ ದೃಷ್ಟಿ ಯಿಂದ ನ್ಯಾಯಬದ್ಧವಾಗಿಯೂ, ಸ್ವಭಾವ ಜನ್ಯವಾಗಿ ಫಲದಾಯಕ ವಾಗಿಯೂ, ಕಲಾದೃಷ್ಟಿಯಿಂದ ಸುಂದರವಾಗಿಯೂ, ಇರುವ ಪ್ರಪಂಚ ವನ್ನು ಅವರು ಬಯಸುತ್ತಾರೆ.

ಹರ್‌ಬರ್ಟ್‌ರೀಡ್

# ವಿಷಯಾನುಕ್ರಮಣಿಕೆ


ಮುನ್ನುಡಿ

ಲೇಖಕನ ಮೊದಲುಮಾತು

೧. ಪೀಠಿಕೆ

೨. ಹೇಳಿಕೆ ಅಥವಾ ಘೋಷಣೆ

೩. ಇಂದು ಮತ್ತು ಮುಂದು

೪. ಹಳ್ಳಿಯ ಯುವಕ

೫. ಮತಧರ್ಮ ಮತ್ತು ಒಣಹೆಮ್ಮೆ

೬. ನಾಗರಿಕ ಯುವಕ

೭. ಮನೆ ಮತ್ತು ಸಮಾಜ

೮. ರಾಷ್ಟ್ರೀಯ ಸ್ಥಾವರತೆ

೯. ವಿದ್ಯಾಭ್ಯಾಸ

೧೦. ಭವಿಷ್ಯದ ಭರವಸೆ

೧೧. ಅನಂತರೋಕ್ತಿ

೧೨. ಅನುಬಂಧಗಳು

(ಅ) ವಕ್ತಿಸಾಮರ್ಥ್ಯ

(ಆ) ಸಂಘಸಾಮರ್ಥ್ಯ

(ಇ) ಪ್ರಿ. ಅಗರವಾಲ್‌ರವರ ಕಾರ್ಯಕ್ರಮ

(ಈ) ಮಹಾತ್ಮಾಜೀಯವರ ಕಾರ್ಯಕ್ರಮ

(ಉ) ಭಾರತೀಯ ಸ್ವಾತಂತ್ರ್ಯ ಸಂಸ್ಥೆ.

# ಮುನ್ನುಡಿ.

## ಡಾ. ಬಿ. ಪಟ್ಟಾಭಿಸೀತಾರಾಮಯ್ಯನವರಿಂದ.

ತಾರುಣ್ಯ ಮತ್ತು ವಾರ್ಧಕ್ಯಗಳು ಅವು ತೋರುವ ಹಾಗೆ ಉತ್ತರ ಮತ್ತು ದಕ್ಷಿಣ ಧ್ರುವಗಳಂತೆ ಪರಸ್ಪರ ವಿರೋಧವಾದವುಗಳಲ್ಲ. ಅವು ಮಾನವಜೀವನದ ವೃತ್ತವನ್ನು ಪೂರ್ಣಗೊಳಿಸುವ ಎರಡು ಭಾಗಗಳು; ಮಾನವನ ಅಭಿವೃದ್ಧಿಯ ನಾನಾಹಂತಗಳು. ನಿತ್ಯತೆಯ ಸಾಗರಕ್ಕೆ ನೀರ ನ್ನೆರೆಯುವ ಜೀವನ ಪ್ರವಾಹದ ಆದ್ಯಂತಗಳನ್ನು ಇವು ಹೋಲುತ್ತವೆ. ನದಿಯ ಮೂಲದಂತೆ, ಹರೆಯದ ವಯಸ್ಸಿನಲ್ಲಿ ಮಾನವ ಹೃದಯದಲ್ಲಿ ಸ್ಫೂರ್ತಿಯ ಬುಗ್ಗೆಗಳು ಉದ್ಭವಿಸಿ, ಪೂರ್ಣಪ್ರವಾಹದೊಡನೆ ಹರಿದು, ಎಲ್ಲಾ ಬಗೆಯ ಅಡಚಣೆಗಳನ್ನು ನಿರ್ಲಕ್ಷಿಸಿ, ಬೆಟ್ಟ-ಗುಡ್ಡಗಳನ್ನು ಕೊರೆದು, ಕಾಡು ಕಣಿವೆಗಳಲ್ಲಿ ಪ್ರವಹಿಸಿ, ಮುಖದಲ್ಲಿ ವಿಸ್ತಾರ ಹೊಂದಿ ಸಾವಕಾಶ ವಾಗಿ ಹರಿಯುವ ನದಿಯಂತೆ, ಪರಿಮಾಣದಲ್ಲಿಯೂ, ಆಂತರಿಕ ವಸ್ತು ಸ್ಥಿತಿಯಲ್ಲಿಯೂ, ಅಭಿವೃದ್ಧಿಯನ್ನು ಹೊಂದಿ, ಅಗಲವಾಗಿಯೂ, ಆಳ ವಾಗಿಯೂ, ಸಾವಕಾಶವಾಗಿಯೂ, ಶಾಂತವಾಗಿಯೂ, ಪೂರ್ಣವಾಗಿಯೂ ಅಗಾಧವಾಗಿಯೂ ಇದ್ದು, ಅನಂತರ ಪೃಥ್ವಿಯನ್ನಾವರಿಸಿರುವ ಶಾಶ್ವತ ಜಲವೊಡನೆ ಮಿಳಿತವಾಗುವುದರಲ್ಲಿ ಕಣ್ಮರೆಯಾಗುತ್ತವೆ. ಇವು ಕ್ರಮೇಣ ಆವಿಯಾಗಿ ಗ್ರೀಷ್ಮ ಕಾಲದಲ್ಲಿ ಆಕಾಶದಲ್ಲಿ ಕಾಣುವ ಮೇಘಗಳಾಗಿ ಪರಿಣಮಿಸಿ ಮಳೆಯನ್ನು ಸುರಿಸಿ ಮಾನವ ವರ್ಗಕ್ಕೆ ಯಥೇಚ್ಛವಾಗಿ ಫಲಪುಷ್ಪಗಳನ್ನು ಕೊಡುತ್ತಾ ಪುನಃ ನದಿಯಾಗಿ ಪ್ರವಹಿಸುತ್ತವೆ. ತಾರಣ್ಯದಲ್ಲಿ ಆಕಾಂಕ್ಷೆ; ವಾರ್ಧಕ್ಯದಲ್ಲಿ ಸಿದ್ಧಿ: ಯೌವನವು ಕಾಲ್ಪನಿಕ, ವಾರ್ಧಕ್ಯವಾಸ್ತವಿಕ; ಯೌವನವು ಮನಃ ಕಲ್ಪಿತ, ವೃದ್ಧಾಪ್ಯ ವ್ಯಾವಹಾರಿಕ. ಯೌವನವು ಆತುರ ವಾರ್ಧಕ್ಯ ಶಾಂತ. ಆದರೂ ತಾರುಣ್ಯದ ಸ್ಫೂರ್ತಿಯು ದುಡುಕುತನಕ್ಕೆ ಇಳಿದು ಹೋಗುವ ಮತ್ತು ವಾರ್ಧಕ್ಯದ ವಿವೇಚನಾಜ್ಞಾನವು ಚಂಚಲತೆಯಾಗಿ ಪರಿಣಮಿಸುವ ಅಪಾಯ ಸಂಭವಿಸ

ಬಹುದು. ಅದರಂತೆ ಯೌವನದ ಆತುರತೆಯು ತಾಳ್ಮೆಗೆಡಬಹುದು; ವಾರ್ಧಕ್ಯದ ಶಾಂತತೆಯು ಜಡತ್ವಕ್ಕೆ ತಗ್ಗಬಹುದು. ಯೌವನದ ಅನುಭವಗಳನ್ನು ಶೋಧಿಸುವುದರ ಫಲಿತವೇ ವಾರ್ಧಕ್ಯ. ಉಳಿದುದನ್ನು ಪುನಃ ಶೋಧಿಸಿ ಶುದ್ಧಿಗೊಳಿಸಬೇಕು. ಭೂತ ಕಾಲದಿಂದ ವರ್ತಮಾನವು ಹುಟ್ಟಿರುವ ರೀತಿಯಲ್ಲಿ ಮನುಷ್ಯನ ಜೀವಿತದ ಉತ್ಸಾಹಭರಿತ ಕಾಲವೇ ಯೌವನ. ವರ್ತಮಾನ ಭೂತ ಭವಿಷ್ಯತ್ತುಗಳು ನಿತ್ಯತೆಯ ಜೀವನ ಯಾತ್ರೆಯ ನಿಲ್ದಾಣಗಳಾಗಿವೆ. ಭೂತವು ವರ್ತಮಾನದಲ್ಲಡಗಿದೆ. ವರ್ತಮಾನವು ಭವಿಷ್ಯದ ಆಗಮನವನ್ನು ಸೂಚಿಸುತ್ತದೆ. ಜೀವನ ಯಾತ್ರೆಯು ಯಾವಾಗಲೂ ಭೂತದಿಂದ ಹೊರಟು, ವರ್ತಮಾನದಲ್ಲಿ ಹಾಯ್ದು ಭವಿಷ್ಯತ್ತನ್ನು ಸೇರುವುದು. ಇದು ಸದಾ ತಿರುಗುತ್ತಿರುವ ಒಂದು ಚಕ್ರ. ಅಥವಾ ಬೆಳವಣಿಗೆಗೂ, ಅಭಿವೃದ್ಧಿಗೂ ಸಾಧಕವಾಗಬಹುದಾದ ಅಂತ್ಯವಿಲ್ಲದ ಒಂದು ಸುರುಳಿ. ಭೂತವೇ ಜೀವನ ಚಿತ್ರದಹಿನ್ನೆಲೆ; ವರ್ತಮಾನವೇ ಚಿತ್ರ; ಭವಿಷ್ಯತ್ತೇ ರಂಗಸ್ಥಳ; ಜ್ಞಾನವೆಂಬ ವಿಶ್ವವಿದ್ಯಾಲಯದಲ್ಲಿ ವಾರ್ಧಕ್ಯವೇ ಪಾಂಡಿತ್ಯದ ಮಹಾಪದವಿ; ತಾರುಣ್ಯವೇ ಅನತಿಕ್ರಮಣೀಯವಾದ ಜೀವನದ ವರ್ಣಮಾಲೆ ಯುವಕನ ಪ್ರಯತ್ನ ಪ್ರಯಾಸಗಳು ವಾರ್ಧಕ್ಯದಲ್ಲಿ ಪರಿಪೂರ್ಣತೆಯನ್ನು ಹೊಂದಿ ಯಶಸ್ವಿಯಾಗುತ್ತದೆ. ಮುಪ್ಪಿಲ್ಲದ ಹರೆಯವು ವ್ಯರ್ಥ; ಪ್ರಾಯರಹಿತವಾದ ವಾರ್ಧಕ್ಯಗಳು ಗೊಡ್ಡುತನದಂತೆ. ಕೌಮಾರ, ಯೌವನ ಮತ್ತು ವಾರ್ಧಕ್ಯಗಳು ಒಂದೇ ರತ್ನದ ಬೇರೆ ಬೇರೆ ಮುಖಗಳು. ಒಂದೇ ಜ್ಯೋತಿರ್ಮಂಡಲದ ನಾನಾ ಕಿರಣಗಳು; ಒಂದೇ ಕಾಮನ ಬಿಲ್ಲಿನ ವಿವಿಧ ಬಣ್ಣಗಳು; ಆದ್ದರಿಂದ ಜೀವನ ತ್ರಿಕೋಣದ ಮೂರು ಬಾಹುಗಳನ್ನೂ ಒಂದರೊಡನೊಂದು ಸಮನ್ವಯಗೊಳಿಸುವುದೇ ಈಗಣ ಸಮಸ್ಯೆಯಾಗಿದೆ. ನದಿಯು ಹೊಸ ಪ್ರವಾಹದ ಮರಳು ಕಣಗಳು ಒಮ್ಮೆ ಒಟ್ಟುಗೂಡಿಸಲ್ಪಟ್ಟು ದ್ವೀಪಗಳಾಗಿ, ಅನಂತರ ಪ್ರವಾಹದಲ್ಲಿ ಕೊಚ್ಚಿ ಹೋಗಿ, ಪುನಃ ಒಟ್ಟುಗೂಡಿ ಮತ್ತೆ ಕಣ್ಮರೆಯಾದರೂ, ಹೇಗೆ ನಾಶವಾಗದೆ ಸದಾ ಇರುವುದೋ ಹಾಗೆ ಜೀವನ ತ್ರಿಕೋನದ ಮೂರು ಬಾಹುಗಳು ಜೀವಮಾನವನ್ನು ರೂಪಿಸುವ ಏಕೈಕವಾದ ಮತ್ತು ನಿರ್ಭಿನ್ನವಾದ ಮೂರು ಹಂತಗಳು ಎಂದು ಭಾವಿಸುವುದೇ ಈ ಸಮಸ್ಯೆಯ ಪರಿಹಾರ.

ಆದ್ದರಿಂದಲೇ ತರುಣರು ವೃದ್ಧರನ್ನು ಗೌರವಿಸುವುದು; ವೃದ್ಧರು ತರುಣರನ್ನು ಪ್ರೀತಿಸುವುದು. ಹಾಗೂ ಯುವಕರು ತಾವು ಸರ್ವಜ್ಞರೆಂಬ ಭಾವನೆಯನ್ನು ಹೇಗೆ ಬಿಡಬೇಕೋ ಹಾಗೆ ವೃದ್ಧರೂ ಕೂಡಾ ತಾವು ಆಶ್ರಯದಾತರೆಂಬ ಅಭಿಮಾನವನ್ನು ತ್ಯಜಿಸಬೇಕು. ಕೌಮಾರ ತಾರುಣ್ಯ ಮತ್ತು ವಾರ್ಧಕ್ಯಗಳು ಶಿಕ್ಷೆ, ಭೋಗ, ಮತ್ತು ಸೇವೆಗಳೆಂಬ ಆಶ್ರಮಗಳಾಗಿ ಪರಿಣಮಿಸುತ್ತವೆ. ಸಕಾಲವಲ್ಲಿಯೂ, ಸರಿಯಾದ ರೀತಿಯಲ್ಲಿಯೂ ಸಂದರ್ಭಾನುಸಾರವಾಗಿಯೂ, ಇವುಗಳಿಗೆ ತಕ್ಕ ಉದ್ಯೋಗಗಳನ್ನು ಒದಗಿಸಿಕೊಡಲಾರದ ಬಾಳು ಶಿಕ್ಷಣರಹಿತವಾದದ್ದೂ, ವ್ಯವಸ್ಥಾಹೀನವಾದದ್ದೂ, ನಿಷ್ಪ್ರಯೋಜನವಾದದ್ದೂ, ಆಗುತ್ತದೆ. ಆದರೆ ಹಾಗೆ ಹಂಚಿಕೊಟ್ಟ ಕಾರ್ಯಗಳು ಚೆನ್ನಾಗಿ ಮಾಡಲ್ಪಟ್ಟರೆ ಜೀವನವು ಸುಶಿಕ್ಷಿತವೂ, ಕ್ರಮಬದ್ಧವೂ, ಫಲಕಾರಿಯೂ, ಆಗಿ ಕೌಮಾರ್ಯದ ಭವಿಷ್ಯವು ಯೌವನದ ಪ್ರಯಾಸ ಮತ್ತು ಹೋರಾಟಗಳಿಗೂ, ವಾರ್ಧಕ್ಯದ ತ್ಯಾಗ ಮತ್ತು ಸೇವೆಗಳಿಗೂ ಸಮಂಜಸವಾಗಿ ಹೊಂದಿಕೊಳ್ಳುತ್ತದೆ. ಕೌಮಾರ್ಯವು ಸ್ಫೂರ್ತಿಯನ್ನೂ ಯೌವನವು ವಿಚಾರ ಪರತೆಯನ್ನೂ, ವಾರ್ಧಕ್ಯವು ಕಾರ್ಯವನ್ನೂ ಸೂಚಿಸುತ್ತವೆ.

ವಂಶಪಾರಂಪರ್ಯ ಮತ್ತು ವಾತಾವರಣ ಒಂದು ಕಡೆ; ಪ್ರಭುತ್ವ ಮತ್ತು ಸ್ವಾತಂತ್ರ್ಯ ಇನ್ನೊಂದು ಕಡೆ; ಇವುಗಳ ಮಧ್ಯೆ ಅಪೇಕ್ಷೆಯ ದಿಂದ ಬಾಧಿಸುವ ಪರಸ್ಪರ ಸಂಘರ್ಷಣಗಳು, ಇವುಗಳಿಂದುಂಟಾದ ಕಠಿಣ ಸಮಸ್ಯೆಗಳು ಭಾರತೀಯ ಯುವಕನ ಮುಂದಿವೆ. ರಾಷ್ಟ್ರೀಯ ಮನೋಭಾವವನ್ನು ಬೆಳಸುವುದೂ ಈ ದುಃಖಾಕ್ರಾಂತವಾದ ದೇಶದಲ್ಲಿ ಚೆನ್ನಾಗಿ ಬೇರೂರಿ ವಿಶಾಲವಾಗಿ ಹರಡಿರುವ ಜಾತಿಮತಗಳ ದುರಾಗ್ರಹ ಮತ್ತು ಪಕ್ಷಪಾತಗಳೆಂಬೆರಡನ್ನು ದೂರೀಕರಿಸಿ ಜೀವಿಸುವುದೂ, ಭಾರತೀಯ ತರುಣರ ಪ್ರಥಮ ಕರ್ತವ್ಯವಾಗಿದೆ. ರಾಷ್ಟ್ರ ಭಾವನೆಯನ್ನು ವೃದ್ಧಿಗೊಳಿಸುವ ಮತ್ತು ರಾಷ್ಟ್ರೀಯತೆಯನ್ನು ಸಂಘಟಿಸುವ ಚಳುವಳಿಗಳಲ್ಲಿ ಹಿರಿಯರನ್ನು ಅನುಸರಿಸಿ ಭಾಗವಹಿಸುವುದೇ ಎರಡನೇ ಕರ್ತವ್ಯ. ರಾಷ್ಟ್ರೀಯತೆಯನ್ನು ತೊರೆದು, ಅಂತರ್ರಾಷ್ಟ್ರೀಯತೆಯನ್ನು ಪ್ರವೇಶಿಸಲು ಕೆಲವರು

ಪ್ರಯತ್ನಪಡುತ್ತಾರೆ. ಇದು ತರುಣರ ಪ್ರಗತಿ ಮಾರ್ಗದಲ್ಲಿರುವ ಒಂದು ದೊಡ್ಡ ಹಳ್ಳ; ಇದನ್ನು ವಿವೇಚನೆಯಿಂದ ತ್ಯಜಿಸಬೇಕು. ಜಾತಿ ಮತ್ತು ಮತಗಳು ದೃಷ್ಟಿಪಥವನ್ನು ಸಂಕುಚಿಸಿ ನೋಟವನ್ನು ಬಂಧಿಸುವ ಹಾಗೆ ಅಸ್ಪಷ್ಟವಾದ ಮತ್ತು ಅನಿರ್ದಿಷ್ಟವಾದ ಅಂತರಾಷ್ಟ್ರೀಯತೆಯು ತಿರುಳಿಲ್ಲದ ಕೇವಲ ವಾಗಾಡಂಬರವಾಗುವ ಸಂಭವವುಂಟು. ಜಾತಿ ಮತ್ತು ಮತಗಳು ಒಂದು ಕಡೆ; ಸಮತಾವಾದ ಇನ್ನೊಂದು ಕಡೆ; ಇವುಗಳ ಮಧ್ಯೆ ಹಾದು ಹೋಗಿ ರಾಷ್ಟ್ರೀಯ ಸಂಸ್ಥೆಗಳನ್ನು ಗೌರವಿಸುತ್ತ ಅವುಗಳ ಧ್ಯೇಯ ಮತ್ತು ಯೋಚನೆಗಳೊಡನೆ ಸಹಕರಿಸುತ್ತ ಮುಂದುವರಿಯುವುದೇ ಅವರ ಕರ್ತವ್ಯ. ಏಕೆಂದರೆ ಜೀವನವೆಲ್ಲ ಒಂದೇ ಆಗಿರುವುದರಿಂದ ನಿರ್ದಿಷ್ಟವಾದ ಗುರಿಯನ್ನು ಸಾಧಿಸಲು ತೊಡಗಬೇಕು.



# ಲೇಖಕನ ಮೊದಲಮಾತು

"ಆದರೆ, ನಮಗೆ ಸ್ವಾತಂತ್ರ್ಯವು ಲಭಿಸುವ ವರೆಗೂ ನಿಮ್ಮ ಸಲಹೆಗಳ ಬಹುಭಾಗವು ಕಾರ್ಯರೂಪಕ್ಕೆ ಬರುವ ಸಂಭವವೇ ಇಲ್ಲವೆಂಬುದು ನಿಮಗೆ ತೋರುವುದಿಲ್ಲವೆ ? ಭಾರತದ ಭಾವೀ ಸಮಾಜನಿರ್ಮಾಣವನ್ನು ಸ್ವತಂತ್ರ ಭಾರತದ ಭೂತಲದಲ್ಲಿಯೇ ರಚಿಸಲು ಸಾಧ್ಯ." ಎಂಬುದಾಗಿ ವಂಗೀಯ ಸುಪ್ರಸಿದ್ಧ ಕ್ರಾಂತಿಕಾರಳಾದ ಬೀಣಾದಾಸ್ ಎಂಬಾಕೆಯು ಈ ಗ್ರಂಥದ ಬಗ್ಗೆ ತನ್ನ ಅಭಿಪ್ರಾಯವನ್ನು ಸೂಚಿಸಿರುವ ಸಂದರ್ಭದಲ್ಲಿ ತಿಳಿಸಿರುತ್ತಾಳೆ. ಆದಾಗ್ಯೂ ನಾವು ನಮ್ಮ ನ್ಯೂನತೆಗಳನ್ನು ಅರಿತು ಅವುಗಳನ್ನು ಪರಿಹಾರ ಮಾಡುವವರೆಗೂ, ಸ್ವಸಾಮರ್ಥ್ಯದಲ್ಲಿ ನಂಬಿಕೆ ಹುಟ್ಟುವ ವರೆಗೂ ಸ್ವಾತಂತ್ರ್ಯವನ್ನು ಪಡೆಯುವುದಾಗಲೀ ಸ್ಥಿರವಾದ ಸಾಮಾಜಿಕ ಸಂಸ್ಥೆಯನ್ನು ನಿರ್ಮಿಸುವುದಾಗಲಿ ಸಾಧ್ಯವಿಲ್ಲ.

ಈಗಿರುವುದಕ್ಕಿಂತಲೂ ಉತ್ತಮವಾದ ಸ್ಥಿತಿಗೆ ಬರಬೇಕಾದರೆ ನಮ್ಮ ಸಹಜ ಗುಣಗಳ ಮೂಲಸಮಸ್ಯೆಗಳು ಮತ್ತು ಬಾಳ್ವಿಕೆ ಸೌಶೀಲ್ಯ ಇವುಗಳನ್ನು ರೂಪಕ್ಕೆ ತರುವ ಮಾರ್ಗಗಳನ್ನು ಚೆನ್ನಾಗಿ ಪರಿಶೀಲಿಸಿ ಗ್ರಹಿಸಬೇಕು. ಜಗತ್ತಿನ ನಾನಾ ಶಕ್ತಿಸುಧಾರಣೆಗಳು ಭೌತಿಕ ಮತ್ತು ಸಾಂಸ್ಕೃತಿಕ ಆಂದೋಲನಗಳಲ್ಲಿ ಸಿಕ್ಕಿಬಿದ್ದು ಹೊಸರೂಪವನ್ನು ತಾಳುತ್ತಿವೆ. ತಂಡೋಪತಂಡ ಜನರನ್ನು ನಿಸ್ಸಹಾಯದ ಜಡತ್ವಕ್ಕೆ ತಂದೊಡ್ಡುತ್ತಿರುವ ಸಂದರ್ಭಗಳನ್ನೂ ಅಂತಹ ಸಂಸ್ಥೆಗಳನ್ನು ಚೆನ್ನಾಗಿ ಪರಿಸೀಲಿಸಿದರೆ, ಅದರಿಂದ ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ. ಅದು ನಮ್ಮನ್ನು ಕ್ರಮಪಡಿಸುವ ಮತ್ತು ಅಭಿವೃದ್ಧಿ ಪಡಿಸುವ ಮಾರ್ಗಕ್ಕೆ ಕರೆದೊಯ್ಯುತ್ತದೆ.

ಬಹುಶಃ ನನ್ನ ಪ್ರಬಂಧದ ಹೊರೆಯು ಶೋಕಗೀತದ ಪಲ್ಲವಿಯಾಗಲು ಅರ್ಹವಾಗಿರಬಹುದು. ವಾಚಕರಿಗೆ ಇಷ್ಟು ಮಾತ್ರ ಖಂಡಿತವಾಗಿ ಹೇಳಬಲ್ಲೆ; ನಾನು ಎಂದೆಗುಂದಿದವನಲ್ಲ ಅಥವಾ ಪಿತ್ತಕೋಶದ ದುರ್ವ್ಯಾಧಿಯಿಂದ ನರಳುತ್ತಿರುವವನಲ್ಲ. ನಾನೊಬ್ಬ ಅಸಂತೃಪ್ತಿಯಿಂದ ಕೂಡಿದ ಮನುಷ್ಯನೇನೋ ಹೌದು. ಆದರೂ ಸಹ ಮಾನವೀಯತೆಯು ಮತ್ತು ನಮ್ಮ ಶಕ್ತಿಸಾಹಸಗಳ ಭವಿತವ್ಯತೆಯಲ್ಲಿ ಗಾಢವಾದ ನಂಬಿಕೆಯೂ, ದೃಢವಾದ ಭರವಸೆಯೂ ನನಗುಂಟು.

ಇತರ ಎಲ್ಲರಂತೆಯೇ ಪ್ರಾಯಶಃ ದೃಢ ಸಂಕಲ್ಪದಿಂದ ಸುಖಸಂಪತ್ತಿನ ಸ್ವರ್ಣಯುಗವನ್ನು ಗಳಿಸಬೇಕೆಂಬ ಮಹದಾಕಾಂಕ್ಷೆಯುಳ್ಳವನಾಗಿದ್ದೇನೆ. ಸುಲಭೋಪಾಯುಗಳೂ ಸಂಕ್ಷೇಪ ಮಾರ್ಗಗಳೂ, ನನಗೆ ತುಂಬಾ ಬೇಸರವನ್ನುಂಟು ಮಾಡುತ್ತಿವೆ. ಅದಕ್ಕಾಗಿಯೇ ನನ್ನ ಮಾತುಗಳು ಕಹಿಯಾಗಿರಬೇಕು.

ನನ್ನೀ ಪ್ರಬಂಧದ ವಸ್ತು ಆವಿರ್ಭೂತವಾಗಿಯಾದರೂ ಸ್ವಯಂ ಪ್ರಜ್ವಲವಾದದ್ದು. ಜನತೆಯ ಮನೋಭಾವಗಳ ಮತ್ತು ನಡೆನುಡಿಗಳ ಐಕ್ಯತೆಯನ್ನು ಸಾಧಿಸುವುದೇ ನನ್ನ ಪ್ರಯತ್ನವಾಗಿದೆ.

ಈ ಸಮಾಲೋಚನೆಯು ಒಂದು ವ್ಯಾಖ್ಯೆಯೇ ಹೊರತು ಇತಿಹಾಸವಲ್ಲ. ಇದು ಭಾರತೀಯ ಯುವಕನನ್ನು ಪ್ರೇರೇಪಿಸುವ ಬಗೆಬಗೆಯಾದ ಸಾಮಾಜಿಕ ಆಂತರಿಕ ಕಾರ್ಯಗಳನ್ನೂ ವಿಭಜಿಸುತ್ತದೆ.

ಭಾರತಿಯ ತರುಣರ ಚಳುವಳಿಗಳ ಪ್ರಗತಿಯ ಇತಿಹಾಸವನ್ನು ಈ ಪ್ರಬಂಧದ ವಾದದ ಘೋಷಣೆಗೆ ಮಾತ್ರವಲ್ಲದೆ ಮತ್ತಾವುದಕ್ಕೂ ಉಲ್ಲೇಖಿಸಿಲ್ಲ. ಈ ತರುಣರ ಚಳುವಳಿ ಮತ್ತು ಅದರ ವಿಶಾಲ ವ್ಯಾಪನೆಗಳೇ ಮುಂದಿನ ಸಮಾಲೋಚನೆಗೆ ವಸ್ತುಗಳಾಗುತ್ತವೆ.

ನನ್ನ ಅನೇಕ ಮಿತ್ರರ ಹೃತ್ಪೂರ್ವಕವಾದ ಸಹಾಯವಿಲ್ಲದಿದ್ದರೆ ಈ ಚಿಕ್ಕ ಪುಸ್ತಕವನ್ನು ಬೆಳಕಿಗೆ ತರಲಾಗುತ್ತಿರಲಿಲ್ಲ. ಆದರೆ ಅವರು ನೀಡಿದ ಸಹಾಯಕ್ಕೆ ಪ್ರತಿಫಲವಾಗಿ ಕೃತಜ್ಞತೆಯನ್ನು ಸೂಚಿಸಲು ವಂದನೆಗಳನ್ನು ಅರ್ಪಿಸಿದರೆ ಅವರು ಅನ್ಯಥಾ ಭಾವಿಸಬಹುದು.

# ನಾಳಿನ ಭಾರತೀಯ ತರುಣರು

## ೧. ಪೀಠಿಕೆ.

ಪ್ರಪಂಚದ ಎಲ್ಲಾ ಭಾಗಗಳಲ್ಲೂ ತರುಣರು ಮತ್ತು ತರುಣಿಯರು ಹೆಚ್ಚು ಹೆಚ್ಚಾಗಿ ಜವಾಬ್ದಾರಿಗಳನ್ನು ವಹಿಸುತ್ತಲಿದ್ದಾರೆ. ಅವರ ಜನಾಂಗದ ಮತ್ತು ಪೂರ್ವಿಕರ ಉತ್ಸಾಹ, ಆವೇಶ ಮತ್ತು ಕಾರ್ಯಸಿದ್ಧಿ ಇವುಗಳ ಕಾರ್ಯದಕ್ಷತೆಯ ಮೇಲ್ಪಂಕ್ತಿಯಿಂದ ಅವರು ಉತ್ಸಾಹಭರಿತರಾಗುತ್ತಿದ್ದಾರೆ. ಚೈನ, ರಷ್ಯಾ, ಜಪಾನ್, ಈಜಿಪ್ಟ್, ಟರ್ಕಿ ಇವು ಒಂದು ಜನಾಂಗದ ಅಭ್ಯುದಯಕ್ಕೆ ಆ ಜನಾಂಗದ ತರುಣರು ವಹಿಸಬಹುದಾದ ಪಾತ್ರವೆಷ್ಟಿರಬಹುದೆಂಬುದಕ್ಕೆ ಸಾಕ್ಷಾತ್ತಾದ ನಿದರ್ಶನಗಳಾಗಿವೆ. ಉದಾಹರಣೆಗೆ, ಚೈನಾ ದೇಶದ ತರುಣರು ಅದರಲ್ಲೂ ವಿದ್ಯಾರ್ಥಿಗಳು ಈ ಶತಮಾನದ ಮೊದಲನೆ ಎರಡು ದಶಮಾನಗಳಲ್ಲಿ ನಡೆದ ಎರಡು ಬಹು ಮುಖ್ಯವಾದ ಚಳುವಳಿಗಳಲ್ಲಿ ಮಹತ್ತರವಾದ ಪಾತ್ರವಹಿಸಿದರು. ಈ ಎರಡು ಚಳುವಳಿಗಳಾವುವೆಂದರೆ:– ೧೯೦೬ರಲ್ಲಿ ಅಫೀಮ್ ವ್ಯಾಪಾರವನ್ನು ನಿಲ್ಲಿಸಲು ಹೂಡಿದ ಚಳುವಳಿ; ಮತ್ತು ಎರಡನೆಯದು ತನ್ನ ನೆರೆಯವರಾದ ಜಪಾನೀಯರ ದಬ್ಬಾಳಿಕೆಯನ್ನು ಎದುರಿಸಲು ಹೂಡಿದುದು. ಅವರು ಈ ಚಳುವಳಿಗಳ ನಾಯಕತ್ವವನ್ನು ಸೈನ್ಯಾಧಿಕಾರಿಗಳಿಂದಲೂ ಮತ್ತು ವಿದ್ವಾಂಸ–ಮುಖಂಡರಿಂದಲೂ ಕಿತ್ತುಕೊಂಡರು. ರಷ್ಯಾ ದೇಶದಲ್ಲಿ "ಕೋಮ್ ಸೋ ಮೋಲ್ಸ್", "ಪಯೋನಿಯರ್ಸ್" ಮೊದಲಾದ ತರುಣರ ಸಂಸ್ಥೆಗಳು, ಕಾರ್ಮಿಕ ರಾಜ್ಯಾಂಗ ರಚನೆ ಮತ್ತು ದೇಶದ ಪ್ರಗತಿ ಮಾರ್ಗ ಇವುಗಳ ಅಭಿವೃದ್ಧಿಗೆ ಬಹಳವಾಗಿ ಕಾರಣವಾಗಿವೆ. ದೇಶ ವಿದೇಶಗಳಲ್ಲಿ ನೆಲೆಸಿರುವ ಸಾಮ್ರಾಜ್ಯಶಾಹಿಯನ್ನು ಪ್ರತಿಭಟಿಸಬೇಕಾದರೆ ಯುವಕ ಚಳುವಳಿಗಳಿಂದ ಮಾತ್ರ ಸಾಧ್ಯವೆಂಬ ಅಂಶವು ಸ್ವಲ್ಪ ಆಶಾಜನಕವಾಗಿದೆ. ಆದುದರಿಂದ ಪವಿತ್ರವಾದ ಸಂಸ್ಕೃತಿ ಮತ್ತು ನಿಜವಾದ ಪ್ರಗತಿ ಇವುಗಳಿಗೆ ಕಾರಣವಾಗುವ ಎಲ್ಲಾ ಶಕ್ತಿ ಸಾಧನೆಗಳನ್ನು ಪ್ರತಿಯೊಬ್ಬ ತರುಣನೂ ಪಡೆಯುವುದು ತನ್ನ ನ್ಯಾಯವಾದ ಹಕ್ಕು ಮತ್ತು ಕರ್ತವ್ಯವೆಂಬುದಾಗಿ ಎಲ್ಲಾ ತರುಣರೂ ತಿಳಿಯಬೇಕು.

ನಮ್ಮ ದೇಶದಂತಹ ಅಧೀನ ರಾಜ್ಯದಲ್ಲಿ ಪರಕೀಯ ದಬ್ಬಾಳಿಕೆಯ ಸಂಕೋಲೆಗಳನ್ನು ಕಿತ್ತೊಗೆಯಬೇಕಾದ ಇನ್ನೊಂದು ಕಾರ್ಯಭಾರವು ಯುವಕರ ಮೇಲೆಯೇ ಬಿದ್ದಿದೆ. ರಾಷ್ಟ್ರದ ಈಗಿನ ಸ್ಥಿತಿಗೆ ತಕ್ಕಂತೆ ಭಾರತೀಯ ತರುಣರು ಕಾರ್ಯರೂಪದಲ್ಲಿ ರಾಷ್ಟ್ರಕ್ಕೆ ತಮ್ಮ ಸೇವೆಯನ್ನು ಸಲ್ಲಿಸದಿರುವುದು ದೌರ್ಭಾಗ್ಯವೇ ಸರಿ. ಡಾಕ್ಟರ್ ಡಿ. ಪಿ. ಮುಖರ್ಜಿಯವರು ಈ ಬಗೆಯ ನಿರುತ್ಸಾಹಕ್ಕೆ ತರುಣರ ಚಳುವಳಿಗಳು ಕ್ರಮಬದ್ಧವಾಗಿ ಸ್ಥಾಪಿಸಲ್ಪಡದಿರುವುದೇ ಕಾರಣವೆಂದು ಅಭಿಪ್ರಾಯಪಡುತ್ತಾರೆ. ರಾಷ್ಟ್ರೀಯ ಭಾವನೆಯ ಪ್ರಗತಿ, ಸೋವಿಯಟ್ ರಷ್ಯಾ ದೇಶದ ರಾಜಕೀಯ ತತ್ವಗಳು ಈ ದೇಶದಲ್ಲಿ ಹರಡುವಿಕೆ ಇವು ೧೯೩೦ರಿಂದ ೧೯೪೦ರ ವರೆಗೆ ನಡೆದ ತರುಣರ ಚಳುವಳಿಯು ಒಂದು ರೂಪಕ್ಕೆ ಬರಲು ತಕ್ಕ ವಾತಾವರಣವನ್ನೊದಗಿಸಿದುವು ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ. ನಾವು ಈ ಸುಸಮಯವನ್ನು ಕಳೆದುಕೊಂಡೆವು. ಅನಂತರ ನಡೆದ ಘಟನೆಗಳು ತರುಣರ ಚಳುವಳಿಯಲ್ಲಿ ಪರಸ್ಪರ ವಿರೋಧವಾದ ಎರಡು ಭಾಗಗಳಾಗಿ ಪರಿಣಮಿಸಿದುವು. ಈ ಗುಂಪುಗಳ ಪರಸ್ಪರ ಪ್ರತಿಭಟನೆಯಲ್ಲಿ ವ್ಯಕ್ತವಾದ ಆವೇಶವು ಇನ್ನೂ ಉತ್ತಮವಾದ ಕಾರ್ಯಕ್ಕೆ ನೆರವಾಗಬಹುದಾಗಿತ್ತು. ಆದರೆ ಯಾವುದೊಂದು ಚಳುವಳಿಯು ಪ್ರಾರಂಭವಾಗಬೇಕಾದರೆ ಆ ಚಳುವಳಿಗೆ ಕಾರಣಭೂತಗಳಾದ ವಿಷಯಗಳಿಗಾಗಿ ಶ್ರದ್ಧೆಯಿಂದ ಹೊಡೆದಾಡುವ ಅಸಾಧಾರಣ ಗುಣಗಳುಳ್ಳ ವ್ಯಕ್ತಿಗಳಿದ್ದಾಗಲೇ ಸಾಧ್ಯವಾಗುತ್ತದೆ. ನಮ್ಮ ಸ್ಥಿತಿಯನ್ನು ನಾವೇ ಒಪ್ಪಿಕೊಳ್ಳುವುದಾದರೆ ನಿಜವಾಗಿಯೂ ನಾವು ಸೋಮಾರಿಗಳು. ಆದರೆ ಕಾರ್ಯಕ್ಷೇತ್ರದಲ್ಲಿ ನಾವು ಹಿಂದುಳಿದಿರುವುದಕ್ಕೆ, ಅವುಗಳು ಮೇಲೆ ತೋರ್ಪಡಿಸಿಕೊಳ್ಳುವುದಕ್ಕಿಂತಲೂ ಹೆಚ್ಚಾಗಿ ಅಂತರ್ಗಾಮಿಗಳಾಗಿಯೂ ಬಂಧನಮಯವಾಗಿಯೂ ಕಾರಣಗಳಿವೆಯೆನ್ನಬಹುದು.

ಈ ನನ್ನ ಪ್ರಬಂಧದಲ್ಲಿ ಭಾರತ ತರುಣರ ಚಳವಳಿಯನ್ನು ಹಿಂಬಾಲಿಸಿರುವ ಮಾನಸಿಕ ಭಾವನೆಗಳು ಮತ್ತು ಅವುಗಳ ಮೇಲೆ ತಮ್ಮ ಪರಿಣಾಮವನ್ನು ಉಂಟು ಮಾಡುವ ಇತರ ಕಾರಣಗಳು ಇವುಗಳನ್ನು ವಿಂಗಡಿಸಲು ಪ್ರಯತ್ನಪಟ್ಟಿದ್ದೇನೆ. ಕಳೆದ ೮ರು ವರ್ಷಗಳಿಂದ ಭಾರತೀಯ

ತರುಣರ ಚಳವಳಿಯನ್ನು ನಾನು ಗಮನಿಸುತ್ತಿದ್ದೇನೆ. ಹಾಗೂ ಅದು ನಾನಾ ರೀತಿಯಲ್ಲಿ ಮುಂದುವರಿದ ಹಾಗೆಲ್ಲಾ ನಾನೂ ಅನೇಕ ವಿಧದಲ್ಲಿ ಅವರಲ್ಲಿ ಭಾಗವಹಿಸಿದ್ದೇನೆ. ಅದರ ಸಾಮಾಜಿಕ ಪ್ರಭಾವವನ್ನು ಮತ್ತು ಆರ್ಥಿಕ ಪರಿಣಾಮಗಳನ್ನು ಆಸಕ್ತಿಯಿಂದ ಗಮನಿಸುತ್ತಿದ್ದೇನೆ. ಅದರ ವೇದಾಂತದ ಹಿನ್ನೆಲೆಯನ್ನೂ ಮತ್ತು ಮತಧರ್ಮದ ಅಸ್ತಿಭಾರವನ್ನೂ ಪರೀಕ್ಷಿಸಿದ್ದೇನೆ. ನನ್ನ ಈ ಶ್ರದ್ಧಾಪೂರ್ವಕವಾದ ವ್ಯಾಸಂಗಕ್ಕೆ ರಾಜಕೀಯ ದೃಷ್ಟಿಪಥವೂ ಮನಶ್ಶಾಸ್ತ್ರ ಸಂಬಂಧವಾದ ಸಂಗತಿಗಳೂ ಮುಖ್ಯ ವಸ್ತುಗಳಾಗಿವೆ.

ಈ ನನ್ನ ಪ್ರಬಂಧವು ಈ ಕೆಳಗೆ ಸೂಚಿಸಿರುವ ರೀತಿಯಲ್ಲಿ ಮುಂದುವರಿಸಲ್ಪಟ್ಟಿದೆ. ಒಂದು ವಿಧವಾದ ದಾಸ್ಯಮನೋಭಾವವು ಎಷ್ಟು ಕಷ್ಟಪಟ್ಟರೂ ತ್ಯಜಿಸಲಾಗದಂತೆ ನಮ್ಮಲ್ಲಿ ಬೇರೂರಿ ನಿಂತುಬಿಟ್ಟಿದೆ. ಕಳೆದ ಇಪ್ಪತ್ತು ವರ್ಷಗಳಿಂದಲೂ ಮಹಾತ್ಮಾ ಗಾಂಧಿ ಮತ್ತು ಅವರ ಅನುಯಾಯಿಗಳು ಎಷ್ಟೇ ಕಷ್ಟಪಟ್ಟು ಪ್ರಯತ್ನಪಟ್ಟಾಗ್ಯೂ, ಮನೋಭಾವವನ್ನು ತೊಡೆದು ಹಾಕಲು ಸಾಧ್ಯವಾಗಲಿಲ್ಲ. ಈ ಮನೋಭಾವವು ನಮ್ಮನ್ನಾಳುವವರ ಉಡಿಗೆ ತೊಡಿಗೆ ಮತ್ತು ನಡೆನುಡಿಗಳನ್ನು ಅನುಕರಿಸುವುದರಲ್ಲಿಯೂ ಕೂಡ ವ್ಯಕ್ತವಾಗುತ್ತಿದೆ. ಆರ್ಥಿಕ ವಿಚಾರದಲ್ಲಾದರೂ ಭದ್ರತೆ ಮತ್ತು ಸಂತುಷ್ಟತೆ ಇವುಗಳ ಮಾರ್ಗವನ್ನೇ ಅನುಸರಿಸುವುದಾಗಿದೆ. ದೃಢವಾದ ಒಂದು ವೃತ್ತಿ ಮತ್ತು ಶಾಂತಿಜೀವನ ಇವುಗಳನ್ನು ಪಡೆಯುವುದರಲ್ಲಿ ಉಚ್ಚಧ್ಯೇಯಗಳು ನಶಿಸಿ ಹೋಗುತ್ತಲೂ ಬಿರುಸಾದ ಕಾರ್ಯಗಳು ತಣ್ಣಗಾಗುತ್ತಲೂ ಇವೆ. ಈ ಶತಮಾನದ ಆದಿ ಭಾಗದಲ್ಲಿ ಜೀವನದ ಪರಿಶುದ್ಧತೆಗೆ ಪ್ರಾಶಸ್ತ್ಯವನ್ನು ಕೊಟ್ಟಿದ್ದರಿಂದ ಕೆಲವರು ಒಂದು ವಿಧವಾದ ದುಡುಕು ಜೀವನದ ಪರಾಕಾಷ್ಠತೆಯನ್ನು ಮುಟ್ಟಿ, ಓಲಾಡುತ್ತಿದ್ದಾರೆ. ಪರಮಾವಧಿಯನ್ನು ಮುಟ್ಟಿರುವ ವಿಚಾರಗಳು ದುಃಖಕರವೂ ನಿಸ್ಸಹಾಯಕವೂ ಆಗಿರುತ್ತವೆ. ಅದರಲ್ಲೂ ಈ ಓಲಾಟವು ಬಹು ಕಠಿಣವೂ ಮತ್ತು ಅಪಾಯಕರವಾದದ್ದೂ ಆಗಿರುತ್ತದೆ.

ಸರ್ವರೂ ನ್ಯಾಯವಾದ ಮತ್ತು ಆರೋಗ್ಯವಾದ ಜೀವನವನ್ನು ಪಡೆಯಲು ಬಾಳಬೇಕೆಂಬ ಸಂಕಲ್ಪವೆ ಸಭ್ಯಜೀವನಕ್ಕೆ ಅತ್ಯಂತ ಆವಶ್ಯಕ

ವಾದದ್ದು. ಪರಿಣಾಮಗಳು ಏನೇ ಆಗಲಿ, ಮಾನವನು ಅಗತ್ಯವಾಗಿ ಕಾರ್ಯನಿರತನಾಗಬೇಕಾದ ಅನೇಕ ಸಂದರ್ಭಗಳು ಇರುವುವು. ಸುಖ ಸಂಪತ್ತಿನ ಸ್ವರ್ಣಯುಗದ ನಿರ್ಮಾಣವನ್ನು ಮತ್ತು ಸುಟ್ಟುಹೋದರೂ ತನ್ನ ಬೂದಿಯಿಂದ ತಿರುಗಿ ಏಳುವ ಕಲ್ಪಿತಪಕ್ಷಿಯಂತೆ ಸಮಾಜದ ಪುನರ್ಜನ್ಮವನ್ನು ತ್ವರಿತಗೊಳಿಸಲುಬೇಕಾದ ಈ ಮನೋದಾರ್ಢ್ಯವೇ ನಮಗೀಗ ಅತ್ಯಾವಶ್ಯಕವಾಗಿ ಬೇಕಾದುದು. ಅನ್ಯಾಯ ಮತ್ತು ಅಸಮಾನತೆ, ಅಮಾನುಷಕಾರ್ಯಗಳು ಮತ್ತು ತಡೆಯಲಶಕ್ಯವಾದ ಮನೋಭಾವನೆ ಗಳು ಇವುಗಳನ್ನು ಪ್ರತಿಭಟಿಸಲು ಉಡುಪು ಮತ್ತು ನಡತೆಗಳಾಗಲಿ, ಭಾಷೆ ಮತ್ತು ವಿದ್ಯಾಭ್ಯಾಸವಾಗಲಿ ಎಣಿಕೆಗೆ ಬರಲಾರವು. ಜೀವನ ಮತ್ತು ಕಾರ್ಯ ಇವನ್ನೇ ಪ್ರತಿಯೊಬ್ಬನೂ ಪ್ರೀತಿಸಬೇಕು. ಆಗಲೇ ಆಶಾಭಾವನೆಯು ಅಮರವಾಗಿಯೂ, ನಿರೀಕ್ಷಿಸಲ್ಪಟ್ಟಿರುವ ಗುರಿಯನ್ನು ಸಾಧಿಸಬೇಕೆಂಬ ಸಾಹಾಸವು ಉತ್ಸಾಹವುಳ್ಳದ್ದಾಗಿಯೂ ಪರಿಣಮಿಸುವುದು.

ರಾಷ್ಟ್ರದ ಹೋರಾಟದಲ್ಲಿಯೂ ಮತ್ತು ಇತರ ಸಣ್ಣ ಕಾರ್ಯಕ್ಷೇತ್ರ ದಲ್ಲಿಯೂ ಅನೇಕ ತರುಣರು ಭಾಗವಹಿಸಿದ್ದಾರೆಂದು ಹೇಳಬಹುದು. ಈ ವಿಚಾರವನ್ನು ಯಾರೂ ಅದರಲ್ಲಿಯೂ ಸಾಮಾಜಿಕ ಚಳುವಳಿಗಳನ್ನು ವಿಮ ರ್ಶಿಸುವವರು ಒಪ್ಪದಿರುವುದಿಲ್ಲ. ಸ್ವಾಭಿಪ್ರಾಯಗಳಿಗಾಗಿ ಹತರಾಗುವವ ರನ್ನೂ ದಂಗೆಕಾರರನ್ನೂ ಯಾರೂ ಮರೆಯಲಾರರು. ಮತ್ತು ಅವರು ಯಾವ ನಿಮಿತ್ತಕ್ಕಾಗಿ ಪ್ರೇರೇಪಿಸಲ್ಪಟ್ಟು ಹೇಗೆ ನಿಷ್ಕಪಟವಾಗಿಯೂ ದೃಢ ಚಿತ್ತದಿಂದಲೂ ಕೆಲಸ ಮಾಡುತ್ತಿದ್ದರೋ ಅಷ್ಟೇ ಅಂತಃಶುದ್ಧಿಯಿಂದಲೂ ನಿಶ್ಚಲತೆಯಿಂದಲೂ ಕೆಲಸ ಮಾಡುವುದೇ ಅವರಿಗೆ ನ್ಯಾಯವಾಗಿ ಅರ್ಪಿಸ ಬೇಕಾದ ಕಾಣಿಕೆ. ಆದರೆ ನಾವು ಈ ಪ್ರಬಂಧದಲ್ಲಿ ಈ ಪರಿಸ್ಥಿತಿಯ ಸಾಮಾನ್ಯ ಒಲವನ್ನು ಆಲೋಚಿಸುತ್ತಿದ್ದೇವೆ. ಇದು ಶಾಸ್ತ್ರೀಯವಾದ ವಿಭಜನೆ. ಇಚ್ಛಾನುಸಾರವಾದ ಆಲೋಚನೆಯಾಗಲಿ ಅಥವಾ ಆಶಾದಾ ಯಕವಾದ ನಿರೀಕ್ಷಣೆಯಾಗಲೀ ದುರದೃಷ್ಟವಾದ ಅಥವಾ ಅದರ ಪ್ರತಿಯಾದ ಮಾರ್ಗವನ್ನು ಬದಲಾಯಿಸಲಾರದು.

ಕೊನೆಯ ಒಂದು ಮಾತು. ಸ್ಪೆಂಗ್ಲರ್‌ನ ನಿರಾಶಾಭಾವನೆಯಂತೆ ದೈವಾಯತ್ತವಾದ ಒಂದು ಪರಿಣಾಮ ಉಂಟೆಂದೂ ಅದರ ವಿನಾ ಬೇರೊಂದು

ಮಾರ್ಗವಿಲ್ಲವೆಂದೂ ನಾವು ನಂಬಿದ್ದೇ ಆದರೆ ಸ್ಪೆಂಗ್ಲರ್‌ನ ಧೈರ್ಯ ಮತ್ತು ನಂಬಿಕೆಯನ್ನು ನಾವೂ ಪಡೆಯೋಣ.

''ಅಂತ್ಯ ನಿರೀಕ್ಷಣೆಯನ್ನು ಕುರಿತು ಸ್ಥೈರ್ಯದಿಂದಿರುವುದು ನಮ್ಮ ಕರ್ತವ್ಯ. ವಿಸೂವಿಯಸ್ ಅಗ್ನಿ ಪರ್ವತದ ಜ್ವಾಲಾಪಾತದ ಕಾಲದಲ್ಲಿ ಅವ ನನ್ನು ಸ್ಥಳವನ್ನು ಬಿಟ್ಟು ಬರಲು ಅಪ್ಪಣೆ ಕೊಡುವುದಕ್ಕೆ ಮರೆತುದರಿಂದ ಯಾವ ರೋಮನ್ ಶಿಪಾಯಿಯ ಎಲುಬುಗಳು ಪಾಂಪೆ ನಗರದ ಮಹಾ ದ್ವಾರದಲ್ಲಿ ಬಿದ್ದು ಇದ್ದದ್ದು ಕಂಡು ಬಂದುವೊ ಆ ಶಿಪಾಯಿಯಂತೆ ಯಾವ ಆಶಾಭಾವನೆಯನ್ನೂ ಇಟ್ಟುಕೊಳ್ಳದೆ ಮತ್ತು ಯಾವ ವಿಧವಾದ ಸಹಾಯ ಮಾರ್ಗವನ್ನೂ ಅಪೇಕ್ಷಿಸದೆ ಇರತಕ್ಕದ್ದು; ಅದೇ ಒಂದು ಹಿರಿಮೆ, ಅದೇ ಸರಿಯಾದ ಸುಶಿಕ್ಷಣದ ಬೆಳವಣಿಗೆಯ ಫಲ. ಸನ್ಮಾನದ ಅಂತಿಮ ಸ್ಥಿತಿಯೇ ಮಾನವನಿಂದ ಪ್ರತ್ಯೇಕಿಸಲಾಗದ ಒಂದು ಮುಖ್ಯ ವಿಷಯ.''

---

## ೨. ಹೇಳಿಕೆ ಅಥವಾ ಘೋಷಣೆ

ನಮ್ಮ ಪ್ರಬಂಧದ ವಿಷಯವಾಗಿ ಒಂದು ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಬೇಕಾಗಿದ್ದರೆ ಅದು ಹೇಗಿರಬೇಕು? ಅದನ್ನು ಹೇಗೆ ಆರಂಭಿಸೋಣವೆ?

''ನಮ್ಮನ್ನು ಘನತೆಗೂ ಸೌಖ್ಯಕ್ಕೂ ಕರೆದೊಯ್ಯಬೇಕಾಗಿದ್ದ ಸಂತತಿಯು ನಮ್ಮನ್ನು ದ್ರೋಹಕ್ಕೆ ಗುರಿಪಡಿಸಿರುವುದರಿಂದ..................''

ಅಲ್ಲ, ಇಂತಹ ಕೊನೆಯಿಲ್ಲದ ವಾಕ್ಯಗಳಿಂದಲ್ಲ. ಅಥವಾ ನಮಗೆ ಸರಿ ಹೋಗದೆ ನಿರಾಶಾಭಾವನೆಯಿಂದ ನಾವು ನಮ್ಮ ಪ್ರಸಿದ್ಧ ಪತ್ರಿಕೆಯನ್ನು ಆರಂಭಿಸಕೂಡದು.

ಹೀಗೆ ಮುಂದುವರಿಯಬಹುದೆ—

''ಮಹೋತ್ಸಾಹಕ್ಕೆ ಹಕ್ಕುದಾರರಾದ ನಾವು ಕ್ರೌರ್ಯವನ್ನು ಎದುರಿಸಿ, ಸರ್ವಸಮತ್ವ ಸ್ವಾತಂತ್ರ್ಯ ಇವುಗಳನ್ನು ಹೊಂದುವುದಕ್ಕೆ ಧೈರ್ಯದಿಂದ ನಮ್ಮ ಸರ್ವ ಶಕ್ತಿಸಾಹಸಗಳನ್ನು ಶೇಖರಿಸೋಣ...................''

ಈ ರೀತಿಯಾಗಿ ಸಂಪ್ರದಾಯಬದ್ಧವಾಗಿರುವುದಕ್ಕೆ ಯಾವಾಗಲೂ ಕಷ್ಟ ಬರುತ್ತದೆ. ಏಕೆಂದರೆ ಸಂಪ್ರದಾಯವು ನೈಜತೆಯನ್ನು ಬಹುಮಟ್ಟಿಗೆ ನಾಶಗೊಳಿಸುತ್ತದೆ. ನಮ್ಮ ಜನರ ಅತಿಶಯವಾದ ಒಂದು ಭಾವನೆಯಿಂದ ತನ್ನಷ್ಟಕ್ಕೆ ತಾನೇ ಪ್ರಕಾಶವಾಗಬೇಕಾಗಿದ್ದ ಸತ್ಯಾಂಶವು ಹೊರಬೀಳದೆ ಅಡಚಣೆಯನ್ನು ಹೊಂದಿದೆ. ಆದರೆ ನಾವು ನಿಗದಿಮಾಡಿ ಪ್ರತಿ ವ್ಯಕ್ತಿಗೂ ಸಂಬಂಧಿಸುವ ಭಾಗವನ್ನು ಶೋಧಿಸಿ ತಗೆಯಲು ಯತ್ನಿಸಬೇಕು. ಭಾರತೀಯ ತರುಣನ ಜೀವಿತವನ್ನು ಸರ್ವತೋಮುಖವಾಗಿ ಹುರಿದುಂಬಿಸುವ ಅನೇಕ ತೆರನಾದ ಶಕ್ತಿಸಾಹಸಗಳನ್ನೂ ಅಂತಃಪ್ರವಾಹಗಳನ್ನೂ ತುಲನೆ ಮಾಡುವುದೇ ನಮ್ಮ ಉದ್ದೇಶ. ಹಾಗಾದರೆ ನಾವು ಹಳೆಯ ಪದ್ಧತಿಯನ್ನು ಅನುಸರಿಸಿ ಕೇವಲ ಸಂಪ್ರದಾಯಕ್ಕಾಗಿ ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಬೇಕಾದುದಿಲ್ಲ. ನಮಗೆ ಸಾಕಾದಷ್ಟು, ಸಾಂಘಿಕ ಅಧಿಕಾರವಾಗಲೀ, ಸರ್ವವ್ಯಾಪಿತವಾದ ಸಂಗತಿಗಳಾಗಲೀ, ಸಿದ್ಧಾಂತಗಳಾಗಲೀ, ಇಲ್ಲವೆಂದು ಒಪ್ಪಿಕೊಳ್ಳೋಣ. ಆದರೆ ಸಂಪ್ರದಾಯಬದ್ಧವಾದ ಪತ್ರಿಕೆಯು ಇಲ್ಲದಿರುವುದಕ್ಕೆ ಇನ್ನೂ ಒಂದು ಕಾರಣವಿದೆ. ಹಳೆಯ ಕಾಲದ ಪ್ರಕಟಣೆಗಳು ವಾಸ್ತವಿಕವೂ ಅಲ್ಲ, ಕಾಲ್ಪನಿಕವೂ ಅಲ್ಲ. ಪರಿಸ್ಥಿತಿಯ ಸರಿಯಾದ ಬಲಾಬಲಗಳನ್ನು ಶೇಖರಿಸದೆ ಇರುವುದೇ ಅವುಗಳಲ್ಲಿ ಸಾಮಾನ್ಯವಾಗಿ ಲೋಪವಾಗಿರುವ ಒಂದು ವಿಷಯ.

ನಮ್ಮ ಸಿದ್ಧಾಂತಗಳು ಅನೇಕರಿಗೆ ಅಹಿತವಾಗಿರಬಹುದು ಸಮಾಜಶಾಸ್ತ್ರದ ವಿಮರ್ಶಕರೂ ವಿದ್ಯಾರ್ಥಿಗಳೂ ಈ ಪ್ರಬಂಧದ ದತ್ತಾಂಶಗಳ ನಿಜವಾದ ಯೋಗ್ಯತೆಯನ್ನು ಒಪ್ಪದಿರಬಹುದು. ಮನಸ್ಸಿನ ಮತ್ತು ಸಂದರ್ಭಗಳ ಹಾಗೂ ರೀತಿಗಳ ಮತ್ತು ನೀತಿಗಳ ಯೋಗ್ಯತಾನಿರ್ಣಯವು ಕೆಲವು ವೇಳೆ ಮುಖ್ಯ ತತ್ವಗಳಲ್ಲಿಯೂ, ಕೆಲವು ವೇಳೆ ಮಾರ್ಗಗಳಲ್ಲಿಯೂ ಸಾಧಾರಣವಾಗಿ ತೀರ್ಮಾನಗಳಲ್ಲಿಯೂ ವ್ಯತ್ಯಾಸ ಹೊಂದಬಹುದು. ಡೈಡಿರಾಟರು ಹೇಳುವಂತೆ "ಅನುಮಾನಾಂಶಗಳ ಕಲಕುವಿಕೆ" ಯಿಂದ ವ್ಯಕ್ತವಾಗುವ ವಿಷಯವೇನೆಂದರೆ— ನಿರಂತರವಾದ ಸತ್ಯಾಂಶ ಮತ್ತು ಶಾಶ್ವತವಾದ ಸದ್ಗುಣ ಇವುಗಳ ವಿಷಯದಲ್ಲಿ ಮಾತ್ರ ನಾವು ದೃಢವಾದ ನಂಬಿಕೆಯಿಡಬಹುದು. ನಮ್ಮ ಜೀವನದ ನಾನಾರೂಪಗಳ ಈ ವಿಭಜನೆಯು ಕೆಲವರಿ

ಗಾದರೂ ತಮ್ಮಲ್ಲಿ ತಾವೇ ಆಲೋಚಿಸುವಂತಹ ಮತ್ತು ತಮ್ಮ ಅಂತರಾತ್ಮ ದಲ್ಲಿ ಹುಡುಕಬೇಕೆನ್ನುವಂತಹ ಕುತೂಹಲವನ್ನುಂಟು ಮಾಡುವುದಾದರೆ ಮತ್ತು ತಮ್ಮ ಸೋಮಾರಿತನವನ್ನು ಬಿಟ್ಟು ಅಲ್ಪವಾದ ಅಥವಾ ಮಹತ್ತಾದ ಕಾರ್ಯವನ್ನು ಮಾಡುವಂತೆ ಪ್ರೇರೇಪಿಸುವುದಾದರೆ ನನ್ನ ಕರ್ತವ್ಯವನ್ನು ನಿರ್ವಹಿಸಿದಂತಾಗುತ್ತದೆ. ಮತ್ತು ಈ ಪ್ರಬಂಧದ ವಸ್ತುವಿನ ಬಗ್ಗೆ ಎಲ್ಲಾ ವಿಷಯಗಳನ್ನೂ ವಿಮರ್ಶಿಸಿದಂತಾಗುತ್ತದೆ.

ಈಗ ಕೆಲವು ದಶಮಾನಗಳಿಂದಲೂ ನಮ್ಮ ನಾಡಿನಲ್ಲಿ ಅನೇಕ ಯುವಕ ಸಂಸ್ಥೆಗಳು ಕೆಲಸ ಮಾಡುತ್ತಿವೆ. ಅವುಗಳು ಮಾಡಿರುವ ಕೆಲಸ ಗಳು ಲೆಕ್ಕಕ್ಕೆ ಬಾರವೆಂದು ಹೇಳಲಾಗುವುದಿಲ್ಲ. ಅವು ಗಳಿಸಿರುವ ಗಾಢವಾದ ನಂಬಿಕೆಯೂ, ಪ್ರಭಾವದ ವ್ಯಾಪ್ತಿಯೂ, ಸಂಪಾದಿಸಿದ ಕೀರ್ತಿಯೂ, ನಿಜ ವಾಗಿಯೂ ಸ್ತೋತ್ರಾರ್ಹವಾದುವುಗಳು. ಆದಾಗ್ಯೂ ಇವು ಎಷ್ಟು ಫಲ ದಾಯಕವಾಗಿಯೂ ಬಲಾಢ್ಯವಾಗಿಯೂ ಇರಬಹುದಾಗಿದ್ದಿತೋ ಅಥವಾ ಇರ ಬೇಕಾದ್ದಿತೋ ಅಷ್ಟು ಇಲ್ಲವೆಂದು ಯಾರಾದರೂ ಭಾವಿಸಬಹುದಾಗಿದೆ. ನಮ್ಮಲ್ಲಿ ಈ ಪ್ರಶ್ನೆಯು ಉದ್ಭವಿಸಿದಾಗ ನಾವು ಮುಂದುವರಿದು ಸಂಶೋ ಧನಾ ವಿಚಾರಣೆಯನ್ನು ಮಾಡಬೇಕಾಗುತ್ತದೆ. ನಾನು ಈ ವಸ್ತುವಿನ ನಿರಾಶಾಭಾವನೆಯನ್ನು ಮಾತ್ರ ಒತ್ತಿ ಹೇಳುತ್ತಿರುವುದಾಗಿ ನಿಮಗೆ ತೋರಿ ಬಂದರೆ, ನಾನು ಅನುಮಾನ ರಥದಲ್ಲಿ ಸಂಚರಿಸುತ್ತಿದ್ದೇನೆಂದು ಪುನಃ ಹೇಳಬಯಸುತ್ತೇನೆ.

ಸಮಾಜ ಸುಧಾರಣೆಯ ಪ್ರಮಾಣವನ್ನು ಕಂಡು ಹಿಡಿಯುವುದು ಸುಲಭಸಾಧ್ಯವಲ್ಲ. ಅದರ ವ್ಯಕ್ತಿತ್ವವನ್ನು ಕಂಡು ಹಿಡಿಯುವುದು ಅಸಾಧ್ಯ. ಮ್ಯಾಕ್ ಐವರ್‌ರವರು ಹೇಳುವಂತೆ ಅಧೀನ ಪರಿಮಿತಿ ಸ್ವರೂಪವು ನಿಷ್ಪ್ರ ಯೋಜನವಾದ ಹೋರಾಟವನ್ನು ಚಿತ್ರಿಸಲು ಸರಿಯಾದ ವಸ್ತುವಾಗಿ ಪರಿ ಣಮಿಸಬಹುದು. ವಿಶೇಷವಾಗಿ ಬದಲಾವಣೆ ಹೊಂದುವ ಮತ್ತು ಸ್ವಾಭಾ ವಿಕವಾಗಿ ಚಲನಾಶಕ್ತಿಯುಳ್ಳ ವಸ್ತುಗಳ ಕಾರಣಗಳನ್ನು ಹುಡುಕುವುದು ನಮ್ಮ ಕೆಲಸವಲ್ಲ. ಸ್ವಭಾವ ಸನ್ನಿವೇಶಗಳು ವ್ಯತ್ಯಾಸ ಹೊಂದಿ ಬದಲಾವಣೆ ಯಾಗಲೇಬೇಕು. ಮತ್ತು ಖಂಡಿತವಾಗಿಯೂ ಪರಿಣಾಮಕಾರಿಯಾದ

ಸಮಾಜ ಶಕ್ತಿಯಿಂದ ಭಾರತೀಯ ತಾರುಣ್ಯವು ಸದಾ ಬದಲಾವಣೆ ಹೊಂದು ತ್ತಿರುವ ಅಚ್ಚಿನಲ್ಲಿ ರೂಪ ಹೊಂದಲೇಬೇಕು. ಮುಖ್ಯವಾಗಿ ನಮಗೆ ಸಂಬಂಧಿಸಿರುವ ವಿಷಯವೆಂದರೆ ಸಾಮೂಹಿಕ ವರ್ತನೆ ಮತ್ತು ಸಾಮೂ ಹಿಕ ಆಕಾಂಕ್ಷೆ; ಈ ಮೂಲಾಧಾರದ ಮೇಲೆ ನಾನು ನನ್ನ ವಿಚಾರಸರಣಿ ಯನ್ನು ಮುಂದುವರಿಸಿದ್ದೇನೆ. ಯುವಕ ಸಂಸ್ಥೆಯ ಮುಂದಿರುವ ತಾಟಸ್ಥ್ಯ ಮನೋಭಾವನೆಯ ನೀರವದ ಕಾರಣಗಳನ್ನು ಕಂಡುಹಿಡಿಯುವುದೇ ಈ ಸಣ್ಣ ಪುಸ್ತಕದ ಧ್ಯೇಯ. ಅವ್ಯಕ್ತವಾಗಿರುವ ಆತ್ಮಶಕ್ತಿಯ ಮತ್ತು ನನ್ನ ಮತ್ತು ನಾಡಿನ ಸೋದರರ ಪರಸ್ಪರ ಹೊಂದಾಣಿಕೆಯ ನಿರ್ದಿಷ್ಟಾಂಶವೇ ಇದು. ಪೂರ್ವಭಾವಿಯಾಗಿ ಆಲೋಚಿಸಿರುವ ಕೆಲವು ಸಿದ್ಧಾಂತಗಳನ್ನು ನಾನು ಇಲ್ಲಿ ವಿಭಜನೆ ಮಾಡಲು ತೊಡಗಿದ್ದೇನೆಯೇ ಹೊರತು ಶೇಖರಿಸಿದ ವಿಷಯುಗಳ ಸಂಗ್ರಹವನ್ನು ಮಾಡುವುದಕ್ಕಲ್ಲ. ಅಂಕೆ ಅಂಶಗಳ ಸಂಶೋ ಧನೆ ನಡೆಸಲು ಸುವ್ಯವಸ್ಥಿತ ಸಂಸ್ಥೆಯ ಸಹಾಯವಾಗಲೀ ಸೌಲಭ್ಯವಾಗಲೀ ನನಗಿಲ್ಲ. ಸಂಪೂರ್ಣವಾಗಿ ನಿಷ್ಪಕ್ಷಪಾತವಾದ ಮತ್ತು ನಿರ್ದೋಷವಾದ ಇಂತಹ ಪ್ರಬಂಧ ರಚನೆಗೆ ವಿಶೇಷ ಜ್ಞಾನವೂ ವಿಶಾಲ ದೃಷ್ಟಿಯೂ ಅತ್ಯವ ಶ್ಯಕ. ಈ ವಿಧವಾದ ಯಾವ ಸಹಾಯ ಸಂಪತ್ತೂ ಇಲ್ಲದೆ ನಾನು ಶೇಖರಿಸ ಬಹುದಾದ ಕೆಲವು ವಿಷಯುಗಳ ವಿಮರ್ಶಾತ್ಮಕ ಅಭ್ಯಾಸ ಬಲದಿಂದ ತೃಪ್ತಿ ಗೊಂಡು ಪ್ರಯತ್ನಪಟ್ಟಿರುತ್ತೇನೆ. ಆದುದರಿಂದ ಅಂದಾಜುಮಾಡಲ್ಪಟ್ಟ ನಿರ್ಣಯ ಅಥವಾ ತೀರ್ಮಾನಗಳಿಂದಲೇ ನಾವು ತೃಪ್ತಿಪಡಬೇಕಾಗಿದೆ. ಅರಿ ಸ್ಟಾಟಲ್ ಹೇಳುವಂತೆ— "ಯಾವ ವಸ್ತುವೂ ಸಹಜವಾದ ಸ್ಥಿತಿಯನ್ನು ಬಿಟ್ಟು ಬೇರೆಯಾಗಿರಲಾರದು." ಎಂಬ ಅಭಿಪ್ರಾಯವನ್ನು ಯಾವ ಚಳುವಳಿಯ ಸ್ವರೂಪವೂ ಸಮರ್ಥಿಸದೆ ಇರಲಾರದು. ತಾರುಣ್ಯವು ಇಲ್ಲಿಗೆ ಮುಗಿಯುತ್ತದೆ, ವಯಸ್ಸು ಮತ್ತು ಪ್ರೌಢತೆಯು ಇಲ್ಲಿ ಆರಂಭ ವಾಗುತ್ತದೆ ಎಂದು ಹೇಳುವುದು ಕಷ್ಟ. ಪರಿಣಾಮದಲ್ಲಿ ಕಷ್ಟವೂ ನಿರಾಶೆಯೂ ಸಂಭವಿಸುತ್ತದೆಯೆಂದು ಹೇಳುವುದು ಇನ್ನೂ ಕಷ್ಟ. ಪ್ರತಿ ಯೊಂದು ಯುಗದಲ್ಲಿಯೂ ಮಹತ್ವವೂ, ಪಾಶವೀಯತೆಯೂ, ಭರ ವಸೆಯೂ, ಅಸಮಾಧಾನವೂ ಸ್ವಲ್ಪವಾದರೂ ಇದ್ದೇ ಇರುತ್ತವೆ. ಸರ್ವ ಸಿದ್ಧಿಗಾಗಿ ಹೋರಾಡುವುದೊಂದೇ ಮಾನವನು ಮಾಡಬಹುದಾದ ಕೆಲಸ.

ಆದರೆ ಸಿದ್ಧಿಯನ್ನು ಪಡೆಯುವುದು ಅಸಾಧ್ಯ. ಏಕೆಂದರೆ ಸಿದ್ಧಿ ಅಥವಾ ಸಂಪೂರ್ಣತೆಯು ಬದಲಾವಣೆ ಹೊಂದತಕ್ಕ ಪರಸ್ಪರ ಸಂಬಂಧವುಳ್ಳ ಒಂದು ಮನೋಭಾವನೆಯಾಗಿದೆ.

---

## ೩. ಇಂದು ಮತ್ತು ಮುಂದು

ಮಾನವನು ಧ್ಯೇಯವನ್ನೇ ಸಾಧಿಸುವ ಸ್ವಭಾವದವನು. ಪ್ರಚೋದನೆ ಮತ್ತು ಮುನ್ನುಗ್ಗುವಿಕೆಯನ್ನು ಕೊಡುವ ಶಕ್ತಿಗಳಾವುವು? ಸ್ಫೂರ್ತಿಯೇ ಅಥವಾ ಬುದ್ಧಿಯೇ? ನನ್ನ ಈ ಊಹೆಯು ಕಾರ್ಯಸಹಿತವಾದ ಮಹದಾಕಾಂಕ್ಷೆಯಾಗಿದೆ. ಆದರೆ ಈಗಣ ಸನ್ನಿವೇಶಗಳು ಭಾರತೀಯ ತರುಣರನ್ನು ಕಾರ್ಯಕ್ಷೇತ್ರದಲ್ಲಿ ಅನರ್ಹತೆಗೆ ದೂಡಿವೆ. ದೇಶದ ತರುಣರು ಮಾನವನ ಸಂಪೂರ್ಣಸಾಮರ್ಥ್ಯದ ಸ್ವರೂಪವನ್ನು ಪಡೆದವರಾಗಬೇಕು. ದೇಶದ ರಾಜಕೀಯ ಸಂಸ್ಥೆಯನ್ನು ಚೆನ್ನಾಗಿ ಸಾರಗೊಳಿಸಿ, ಯಶಸ್ವಿಯಾದ ಸಂಸ್ಕೃತಿಯಿಂದ ಕೂಡಿದ ನಾಗರಿಕತೆಯನ್ನು ಬೆಳೆಸಬೇಕು. ನಿರ್ಬಂಧದಿಂದ ಪೀಡಿಸಲ್ಪಟ್ಟ ನಮ್ಮ ದೇಶದ ತರುಣರ ನಿಟ್ಟುಸಿರನ್ನು ಈ ದೇಶವು ತಡೆದು ಕೊಂಡಿರುವುದು ಹೆಚ್ಚು ವ್ಯಾಕುಲವನ್ನುಂಟುಮಾಡುತ್ತದೆ. ನಮ್ಮ ದೇಶವು ನಿಶ್ಚೇತನವಾದ ಮನಸ್ಸುಳ್ಳ ಮತ್ತು ನಿರ್ಬಲವಾದ ನರಗಳನ್ನುಳ್ಳ ನಿರುತ್ಸಾಹಿಗಳಾದ ಜನರನ್ನು ಸೃಷ್ಟಿಸಿರುವುದು ಅತ್ಯಂತ ನಿರಾಶೆಗೆ ಕಾರಣವಾಗಿದೆ.

ನಮ್ಮ ದೌರ್ಭಾಗ್ಯವುಳ್ಳ ಈ ದೇಶದ ರಾಷ್ಟ್ರೀಯ ಸಂಸ್ಥೆಯು ಕೆಲವು ನಾಯಕರ ಸರ್ವಾಧಿಕಾರದಲ್ಲಿಯೇ ಮುಂದುವರಿಯುತ್ತಿದೆ. ಅದರ ಹಾಗೆಯೇ ಯುವಕರ ಪ್ರಗತಿಯೂ ಸಾಗುತ್ತದೆ. ಯುವಕರು ತಮ್ಮ ಪ್ರಗತಿಮಾರ್ಗದಲ್ಲಿ ಎಸೆದವನಿಗೇ ಹಿಂತಿರುಗಿ ಬರುವ ಆಯುಧದ ವೇಗವನ್ನೇ ಅನುಕರಿಸುತ್ತಿದ್ದಾರೆ. ಅವರು ವೇಗದಲ್ಲಿ ಏಡಿಯನ್ನು ಅನುಕರಿಸುತ್ತಿಲ್ಲ. ಆದರೆ ಆ ವೇಗವು ಜೂಜಿನ ಕುದುರೆಯ ನಾಗಾಲೋಟಕ್ಕೆ ಸರಿಸಮನಾಗಿದೆ. ಎರಡು ಗಜ ಮುಂದಕ್ಕೆ ಹೋಗಿ ನಾಲ್ಕುಗಜ ಹಿಂದಕ್ಕೆ ಬಂದ ಕುದುರೆಯು

ವಿಚಾರ ನಾವು ಕೇಳಿದ್ದೇವೆ. ಇದು ಅಸಂಭವವೆಂದು ಭಾವಸಿದ್ದೆವು. ಆದರೆ ಈಗ ಬಹುಮಟ್ಟಿಗೆ ಅಧು ಸತ್ಯವಾದುದೆಂದು ದುಃಖದಿಂದ ಹೇಳಬೇಕಾಗಿದೆ.

ನಾವು ನಿಸ್ಸಂದೇಹವಾಗಿಯೂ ದೇಹ, ಮನಸ್ಸು ಮತ್ತು ಬುದ್ಧಿ ಇವುಗಳ ವಿಚಾರದಲ್ಲಿ ಬಹಳ ಚಟುವಟಿಕೆ ಉಳ್ಳವರಾಗಿರುತ್ತೇವೆ. ತರುಣನು ಮಾನವನ ದೇಹಶಕ್ತಿ ಮತ್ತು ದಾರ್ಢ್ಯತೆಗಳನ್ನು ಪಡೆಯುತ್ತಾನೆ. ಅಲ್ಲದೆ ಅವನು ರಕ್ಕಸಬಲ, ಬೆಚ್ಚಿಬೀಳದ ನರಗಳು, ದೃಢಕಾಯ ಇವುಗಳನ್ನೂ ಪಡೆಯುತ್ತಾನೆ. ಅಮಾನುಷ ಕೃತ್ಯಗಳನ್ನೂ ಮಹತ್ಕಾರ್ಯಗಳನ್ನೂ ಸಾಧಿಸಲು ಶಕ್ಯವಾದ ಈ ಹರೆಯದ ಮಾಂಸಖಂಡಗಳು ಒಂದು ವೇಳೆ ಉಪೇಕ್ಷೆಯಿಂದ ನಿಶ್ಚಲತೆಯನ್ನು ಹೊಂದಿ ನಿರುಪಯೋಗವಾಗಬಹುದು.

ಕಣ್ತುಂಬ ನೋಡಿ ಹಿಗ್ಗಿ, ಅರಿತು ಅನೇಕ ವಿಷಯುಗಳನ್ನು ಜೀರ್ಣಿಸಿ ಕೊಳ್ಳಬಹುದಾದ ಇಡೀ ಪ್ರಪಂಚವೇ ಯುವಕರ ಸುತ್ತಲೂ ಇದೆ. ಪೂರ್ವ ಕಾಲದ ಕವಿಗಳು ಹಾಡಿದಕೀರ್ತಿ ಯುವಕರಿಗೇ ಸೇರಿದೆ. ಅವರ ಮತ್ತು ನಾಡಿನ ಸೋದರರ ಅಂತ್ಯರಹಿತವಾದ ಭವಿಷ್ಯದ ಶೂನ್ಯತೆಯು ಅವರ ಮುಂದಿದೆ ಅವರು ಒಂದು ದೊಡ್ಡ ವೈವಿಧ್ಯವನ್ನೂ, ಉಪಯುಕ್ತವಾದ ಚಳುವಳಿಯ ಸ್ವಾತಂತ್ರ್ಯವನ್ನೂ ಅನುಭವಿಸುತ್ತಿದ್ದಾರೆ. ಅವರು ಜೀವನದ ಗಹನವಾದ ಕಾರ್ಯಗಳನ್ನು ಸಾಧಿಸಬೇಕಾಗಿದ್ದರೆ, ಅವರ ಸಂಕುಚಿತ ಮನೋಭಾವನೆ ಗಳಿಗೆ ಕ್ರೋಢೀಕರಿಸಲ್ಪಟ್ಟ ಅನುಭವಗಳ ಸಹಕಾರ ಅತ್ಯಂತ ಆವಶ್ಯಕ. ಸಾಮಾನ್ಯವಾಗಿ ತರುಣರು ಪೋಷಕರ ಬೆಂಬಲವನ್ನು ಪಡೆದಿರುವುದರಿಂದ ತಮ್ಮನ್ನು ತಾವೇ ನೋಡಿಕೊಳ್ಳಬೇಕಾದ ಸಂಭವವಿರುವುದಿಲ್ಲ. ತಮ್ಮನ್ನು ತಾವು ಒಂದು ರೂಪಕ್ಕೆ ತಂದುಕೊಳ್ಳುವುದಕ್ಕೂ, ಅವಶ್ಯಕವಿದ್ದಲ್ಲಿ ಅವನ್ನು ಬದಲಾಯಿಸಿಕೊಳ್ಳುವುದಕ್ಕೂ ಇದೇ ಸಕಾಲವಾಗಿರುತ್ತದೆ. ವಿಶ್ವದ ಪ್ರಯೋಗಶಾಲೆಯಲ್ಲಿ ಜೀವನವು ಅವರಿಗೆ ಸಹಾಯ ಮಾಡುತ್ತದೆ. ಕಾಲ ಚಕ್ರವು ತನ್ನ ಪಾತ್ರವನ್ನು ನಿರ್ವಹಿಸುತ್ತಲೇ ಇರುತ್ತದೆ. ಮನುಷ್ಯನ ಮೇಲೆ ತಪ್ಪದೆ ಪರಿಣಾಮವನ್ನುಂಟುಮಾಡುವ ಸಹಜಗುಣಗಳು ನಿಧಾನ ವಾಗಿ ಸಂಪೂರ್ಣತೆಯನ್ನು ಹೊಂದುವುವು. ಅದೇ ಕಾಲದಲ್ಲಿಯೇ ಬುದ್ಧಿ ಕೌಶಲ್ಯ, ಉಪಯುಕ್ತಜ್ಞಾನ ಇವು ಜಾಗ್ರತೆಯಾಗಿ ಮುಂದುವರಿಯುವುವು.

ತನ್ನ ಸುತ್ತಲೂ ಇರುವ ವಿಶ್ವದ ಪ್ರಭಾವವು ಯುವಕರ ಮೇಲೆ ಬಿದ್ದಿದೆ. ಅವರು ಅವುಗಳ ಸವಿನೆನಪುಗಳನ್ನು ಅನುಭವಿಸುತ್ತಿದ್ದಾರೆ. ಅವುಗಳ ವಿಷಯದಲ್ಲಿ ಅವರಿಗೆ ಬಹಳ ಸಲಿಗೆ. ಅವುಗಳ ವಿಷಯವಾಗಿ ಚಿಂತೆ ಮಾಡಲು ಅವರಿಗೆ ತಾಳ್ಮೆಯೇ ಇಲ್ಲ. ಅವುಗಳ ವಿಷಯದಲ್ಲಿ ಚಿಂತೆ, ಧ್ಯಾನ, ಆಲೋಚನೆ, ವಿಚಾರಣೆ ಮತ್ತು ವಿಮರ್ಶೆ ಇವುಗಳನ್ನು ತರ್ಕಿಸುವ ಸಂಭವವೇ ಇಲ್ಲ. ಹಾಗಾದರೆ ಒಂದು ತೀರ್ಮಾನಕ್ಕೆ ಬರುವುದು ನಿಶ್ಚಯವಾಗಿಯೂ ಒಂದು ಹಾಸ್ಯಾಸ್ಪದ ವಿಷಯ.

ಭಾರತೀಯ ತರುಣರಾದ ನಮ್ಮಲ್ಲಿ ಈ ಸುಗುಣಗಳೆಲ್ಲಾ ತುಂಬಿವೆ. ಆದಾಗ್ಯೂ ನಾವು ಸರಿಪಡಿಸಲಾಗದ ಒಂದು ಯಂತ್ರದಂತೆ ನಿಶ್ಚೇತನರಾಗಿದ್ದೇವೆ. ಪುನಃ ಹೇಳುವುದಾದರೆ ನಾವು ನಿರುತ್ಸಾಹಿಗಳೂ, ನಿಷ್ಪ್ರಯೋಜಕರೂ ಆಗಿದ್ದೇವೆ. ಜ್ಞಾಪಕಶಕ್ತಿಯನ್ನು ಕಳೆದುಕೊಂಡ ಮಾನವನಂತೆ ಈ ಪ್ರಪಂಚವು ನಮಗೆ ಕಾಣಬರುತ್ತದೆ. ಮಾನವನ ಸಮಸ್ಯೆಗಳನ್ನು ಬಗೆಹರಿಸಬೇಕೆಂದು ಒಬ್ಬ ಹೊಸಬ ಒಂದು ದೊಡ್ಡ ಗಾಡಿಯನ್ನು ನಡೆಸುವ ಹಾಗೆ ರಾಜನೀತಿ ಶಾಸ್ತ್ರಜ್ಞರು ತಮ್ಮ ಕೈಲಾದಷ್ಟು ಶಕ್ತಿಸಾಮರ್ಥ್ಯಗಳನ್ನು ಉಪಯೋಗಿಸಿ, ಪ್ರಯತ್ನ ಪಟ್ಟಿರುತ್ತಾರೆ. ಕೆಲವರು ಸಹಜವಾಗಿ ತಿಳಿಸಿರುವಂತೆ ರಾಜಕೀಯ ಮುಂದಾಳುಗಳೂ, ತತ್ವಜ್ಞಾನಿಗಳೂ, ಆರ್ಥಿಕ ಮತ್ತು ಸಾಮಾಜಿಕ ಸಂಸ್ಥೆಗಳ ನಾಯಕರೂ, ನೈತಿಕ ಶೂನ್ಯತೆಯ ಅಂಧಕಾರದಲ್ಲಿಯೂ, ಪಾರಮಾರ್ಥಿಕ ಗೊಂದಲದಲ್ಲಿಯೂ ಸಿಕ್ಕಿಬಿದ್ದು ತಡವರಿಸುತ್ತಿದ್ದಾರೆ. ಜೀವನಧ್ಯೇಯ ಮತ್ತು ಅದರ ಮಾಪರಿಗಳ ಉದ್ದೇಶಗಳನ್ನು ಕಂಡುಹಿಡಿಯಲು ಮಾಡುತ್ತಿರುವ ಹೊಸ ಪ್ರಯತ್ನಗಳನ್ನು ಮಾನವೀಯತೆಯು ಸಾಕ್ಷಾತ್ತಾಗಿ ನೋಡುತ್ತಿದೆ. ಮಾನವನನ್ನು ಈ ವಿಶಾಲ ಜಗತ್ತಿನ ಎಲ್ಲಾ ಯುವಕರು ದರೋಡೆಕಾರರಿಂದ ಪೆಟ್ಟುಗಳನ್ನು ತಿಂದ ಅನಾಥ ಶಿಶುಗಳಂತೆ ವಿಶ್ವಾಸರಹಿತರಾಗಿ, ಬಲಹೀನರಾಗಿ, ನಿರ್ಲಕ್ಷಿಸಲ್ಪಟ್ಟಿದ್ದಾರೆ. ಅನಾಥ ಶಿಶುಗಳು ಅಳುತ್ತವೆ. ಅನಾಥ ಯುವಕರಂತೂ ಅಳುವುದಕ್ಕೂ ಯತ್ನಿಸುವುದಿಲ್ಲ. ಅವರು ಅತಿ ಕೆಟ್ಟವರಿಂದ ಕೆಟ್ಟವರನ್ನು ಕಾಪಾಡಲು ಸಿದ್ಧರಿದ್ದಾರೆ. ಹೀಗೆ ಮಾಡುವುದರಿಂದ ಭೂತದಯೆ ಪಶ್ಚಾತ್ತಾಪಗಳಿಲ್ಲದ ಧನಿಕರಿಗೆ ಬೆಂಬಲ ಕೊಟ್ಟಂತಾಗಿದೆ.

ರಷ್ಯಾ, ಚಿನಾ, ಜರ್ಮನಿ, ಜಪಾನ ಮತ್ತಿತರ ಭಾಗಗಳ ಅನೇಕ ತರುಣರು ಜೀವನವನ್ನು ಕಬಳಿಸುವ ಯುದ್ಧಸೇನೆಯನ್ನು ಬಲಪಡಿಸುತ್ತಿದ್ದಾರೆ ಕೆಟ್ಟದಕ್ಕೋ ಒಳ್ಳೆಯದಕ್ಕೋ ಅನೇಕ ತರುಣವೀರರು ತಮ್ಮ ಪ್ರಾಣವನ್ನು ಒಪ್ಪಿಸಿದ್ದಾರೆ. ಅನೇಕರು ಸಮಾಧಿಯನ್ನೋ ಸಾಗರವನ್ನೋ ಸೇರಿದ್ದಾರೆ. ಅನೇಕರು ವಿಮಾನಗಳಲ್ಲಿ ಸಂಚರಿಸಿ ಅಪಘಾತಕ್ಕೆ ಸಿಕ್ಕಿ, ಭಸ್ಮವಾಗಿದ್ದಾರೆ. ಇನ್ನುಕೆಲವರು ಹಡಗುಗಳ ಘರ್ಷಣೆಗಳಲ್ಲಿ ಸಿಕ್ಕಿ ಪ್ರಾಣತ್ಯಾಗ ಮಾಡಿದ್ದಾರೆ ಮುಂದಾದರೂ ಪ್ರಪಂಚದ ವ್ಯವಸ್ಥೆಯು ಉತ್ತಮಗೊಳ್ಳಬಹುದೆಂಬ ಒಂದು ಭರವಸೆಯನ್ನಿಟ್ಟುಕೊಂಡು ಪ್ರಾಣವನ್ನು ಅರ್ಪಿಸಿರುತ್ತಾರೆ. ಭಾರತೀಯ ತರುಣರು ಅದೃಷ್ಟವಶಾತ್ ಈ ಯುದ್ಧದಲ್ಲಿ ಹೆಚ್ಚಾಗಿ ಮೃತರಾಗಲಿಲ್ಲ. ನಾವು ಆಂದೋಲನಗಳನ್ನು ದಾಟಬಹುದು. ಹಾಗೆ ಮಾಡುವುದಾದರೆ—ಹಾಗೆ ಮಾಡುತ್ತೇವೆಂಬ ಸಂಭವವೂ ಇದೆ.—ಉನ್ನತಾತ್ಮ ಗಳು ಹತ್ತಿಸುವ ಜ್ಯೋತಿಗಳನ್ನು ಪ್ರಕಾಶಗೊಳಿಸುವ ಕಾರ್ಯಭಾರವು ನಮ್ಮ ಮೇಲೆ ಬೀಳುತ್ತದೆ. ನಾವು ಸತ್ಯ, ಧರ್ಮ, ಸೌಂದರ್ಯಗಳನ್ನು ಶಾಶ್ವತವಾಗಿರುವಂತೆ ನೋಡಿಕೊಳ್ಳಬೇಕಾಗುತ್ತದೆ. ನಾವು ನಮ್ಮ ಮುಂದಿ ರುವ ಈ ಮಹತ್ಕಾರ್ಯಕ್ಕೆ ಸಿದ್ಧರಾಗುತ್ತೇವೆಯೇ? ನಾವು ಈ ನಿರಾಶಾ ದಾಯಕವಾದ ವಿದ್ಯಮಾನಗಳನ್ನು ಸರಿಪಡಿಸಬಲ್ಲೆವೆ?

ಈ ಪ್ರಶ್ನೆಯನ್ನು ಧೈರ್ಯವಾಗಿ ಎದುರಿಸುವ ಕಾಲವು ಬಂದಿದೆ. ಸಂಪೂರ್ಣವಾಗಿ ಮಾರ್ಪಡಿಸಲು ಸಮಸ್ತ ಶಕ್ತಿಸಾಮರ್ಥ್ಯಗಳನ್ನು ವಿನಿಯೋ ಗಿಸಲಾಗುತ್ತದೆ. ಅಳಿದು ಹೋಗುತ್ತಿರುವ ಸಂಸ್ಕೃತಿ ಮತ್ತು ನಾಶವಾಗುತ್ತಿ ರುವ ನಾಗರಿಕತೆಗಳ ಮುಂದಾಳುಗಳೆಂದು ಸಂಸ್ಥೆಗಳ ಕಾರ್ಯಕಲಾಪಗಳ ನಾಯಕರು ತೋರ್ಪಡಿಸಿಕೊಳ್ಳುತ್ತಿದ್ದಾರೆ. ಸಾಮಾನ್ಯಜನರು ಕಷ್ಟನಷ್ಟ ಗಳಲ್ಲಿ ಸಿಕ್ಕಿ ಸೊರಗಿದ್ದಾರೆ. ಈಗ ಅವರು ಮುಂದಾದರೂ ಒಳ್ಳಿತಾಗುವ ದೆಂದು ನಿರೀಕ್ಷಿಸುತ್ತಿದ್ದಾರೆ. ಅಲ್ಲದೆ ಈ ಸಮುದಾಯ ಜೀವನದ ಮಧ್ಯೆ ಥಟ್ಟನೆ ತಲೆಯೆತ್ತಲು ಯತ್ನಿಸುತ್ತಿದ್ದಾರೆ. ಅವರು ಒಂದು ಹೊಸ ಪ್ರಪಂಚವನ್ನು ನಿರ್ಮಿಸಲು ದೇಹಶಕ್ತಿ ಸಾಮರ್ಥ್ಯಗಳನ್ನೂ, ಬುದ್ಧಿ ಬಲಾ ಬಲಗಳನ್ನೂ ಅರ್ಪಿಸುತ್ತ ವಿಶ್ವಪ್ರಯತ್ನಗಳನ್ನು ನಡೆಸುತ್ತಿದ್ದಾರೆ. ದೇಶದ ತರುಣರು ಇಂತಹ ಸಮುದಾಯಕ್ಕೆ ಸೇರಬೇಕು. ಈ ಸಮುದಾಯವು

ಬೆಳಕಿಗೆ ಬರಬೇಕು. ಗೊತ್ತುಗುರಿಗಳಿಲ್ಲದೆ ಅಂಧಕಾರದಲ್ಲಿ ನುಗ್ಗಲು ಯತ್ನಿಸುತ್ತಿರುವ ಕುರುಡರಂತಿರುವ ಜನರನ್ನು ಕಿತ್ತೊಗೆದು ಆ ಸ್ಥಳವನ್ನು ಈ ಯುವಕರು ಆಕ್ರಮಿಸಿಕೊಳ್ಳಬೇಕು. ಇಡೀ ಸಮಾಜವನ್ನೇ ಪಾತಾಳಕ್ಕೆ ತಳ್ಳುತ್ತಿರುವ ನಾಯಕರನ್ನು ದೂರಮಾಡಿ, ಈ ಯುವಕರು ಮುಂದೆ ಬರಬೇಕು; ಭಾವೀ ವಿಶ್ವಸಂಸ್ಥೆಯ ಅಸ್ತಿಭಾರ ಮತ್ತು ನಿರ್ಮಾಣ ಕಾರ್ಯವನ್ನು ನಮ್ಮ ಯುವಕರೇ ಕೈಗೊಳ್ಳಬೇಕು ನಾಳಿನ ಜಗತ್ತು ಇಂದಿನ ಯುವಕ ಯುವತಿಯರಿಗೆ ಸೇರಿದ್ದು. ಈ ದುರಂತ ನಾಟಕದ ನಟರೇ ಜನತೆಯ ಆಶಾಭಾವನೆಗಳನ್ನು ಮತ್ತು ರಕ್ತಮಾಂಸಗಳನ್ನು ಛಿದ್ರಛಿದ್ರ ಮಾಡಿದ್ದಾರೆ. ೯ ೪-೧೯ ರಲ್ಲಿ ಕೆಲವು ವೃದ್ಧರು ಪ್ರಪಂಚ ವನ್ನೇ ಅಲ್ಲೋಲ ಕಲ್ಲೋಲ ಮಾಡಿದರು. ಈಗಲೂ ಅಂತಹವರೇ ಇಂದಿನ ಸ್ಥಿತಿಗೂ ಕಾರಣರಾಗಿರುತ್ತಾರೆ. ಚಿರಕಾಲದ ಸೋಮಾರಿತನ ವನ್ನು ಕೊಳವಿಹಾಕಿ, ಭವಿಷ್ಯದ ಅಭ್ಯುದಯವನ್ನು ಸಾಧಿಸಲು ಕಾರ್ಯ ರಂಗಕ್ಕಿಳಿದು ಮುನ್ನುಗ್ಗುವುದೇ ಈಗಿನ ಕರ್ತವ್ಯ. ಮನುಷ್ಯನು ಉತ್ಕ್ರಾಂತಿ ಗೊಳಿಸಬಲ್ಲನು. ಅಲ್ಲದೆ ಹಿಂದೆ ಸಾಮಾಜಿಕ ಸನ್ನಿವೇಶಗಳನ್ನು ಉತ್ಕ್ರಾಂತಿ ಗೊಳಿಸಿದ್ದಾನೆ. ಅದರಂತೆ ಆ ಸನ್ನಿವೇಶಗಳೂ ಸಹ ಅವನನ್ನು ರೂಪ ಗೊಳಿಸಿವೆ. ಸಾಗರದ ಘೋರವಾದ ಅಲೆಗಳು ಭಾರಿ ತುಂಡುಗಳನು ಬಂಡೆಗಳ ಕಡೆಗೆ ತಳ್ಳುವಂತೆ, ನಮ್ಮ ದೇಶದಲ್ಲಿ ನಮ್ಮ ಮನೆ, ನಮ್ಮ ಸಮಾಜ, ನಮ್ಮ ನಾಡು ಇವು ನಮ್ಮನ್ನು ಮೌಢ್ಯ, ಸಂಕುಚಿತಭಾವನೆ ಮೂರ್ಖತನ ಮತ್ತು ಪಕ್ಷಪಾತ ಇವುಗಳ ಕಡಗೆ ತಳ್ಳಿಬಿಟ್ಟಿವೆ.

ಉಪಯುಕ್ತವಾದ ತಿಳಿವಳಿಕೆ ಮತ್ತು ಪಕ್ಷಪಾತಭಾವನೆ ಇವು ದೈವಾಂಶದಲ್ಲಿ ನಂಬಿಕೆಯನ್ನು ಉಂಟುಮಾಡಿದೆ. ಆದರೆ ಅವು ನಮ್ಮ ಜೀವನ ಮತ್ತು ಅದರ ಸಮಸ್ಯೆಗಳನ್ನು ಬಹುಮಟ್ಟಿಗೆ ನಿರ್ಲಕ್ಷಿಸುವಂತೆ ಮಾಡಿದೆ. ಮೋಕ್ಷಮಾರ್ಗವನ್ನು ಪಡೆಯಲು ಬೇಕಾದ ಜ್ಞಾನವನ್ನು ಅವು ಒದಗಿಸಿವೆ. ಆದರೆ ಮನುಷ್ಯನ ಪರಸ್ಪರ ಸಂಬಂಧದ ಅವಶ್ಯಕತೆಯನ್ನು ಅವು ತಿಳಿಸಿಲ್ಲ. ನಮ್ಮಲ್ಲಿ ಮೂಢಾಚಾರ ಮತ್ತು ಮತಸಂಬಂಧವಾದ ನಂಬಿಕೆಗಳು ರಕ್ತಗತವಾಗಿವೆ. ನಾವು ಅವುಗಳನ್ನು ಪವಿತ್ರವೆಂದೂ, ನಿರ್ವಿಕಾರವೆಂದೂ, ಎಲ್ಲಾ ಕಾಲದಲ್ಲಿಯೂ ಎಲ್ಲಾ ಸನ್ನಿವೇಶಗಳಲ್ಲಿಯೂ

ಪ್ರಯೋಗಿಸಬಹುದೆಂದೂ ತಿಳಿದಿದ್ದೇವೆ. ಮಾನವ ಜೀವನದ ನಾನಾರೀತಿಗಳನ್ನೂ ಪ್ರಭಾವವನ್ನೂ ಮರೆತಿದ್ದೇವೆ. ಬಗೆಬಗೆಯ ಬಣ್ಣಗಳಿಂದ ಕೂಡಿದ ಅಂತರಿಕ್ಷವನ್ನು ನಾವು ಚೆನ್ನಾಗಿ ನೋಡಿಲ್ಲ. ಪ್ರಕೃತಿಯು ಅಸಂಖ್ಯಾತವಾದ ಮಾದರಿಗಳಲ್ಲಿಯೂ, ಬಣ್ಣಗಳಲ್ಲಿಯೂ ತೋರ್ಪಡಿಸಿಕೊಳ್ಳುತ್ತದೆ. ಪ್ರಕೃತಿಯು ಪ್ರಭಾತದ ಸೂರ್ಯಕಾಂತಿಯನ್ನೂ ಉಜ್ವಲಗೊಳಿಸುತ್ತದೆ. ಸಂಧ್ಯಾಕಾಲದ ಮುಸುಕಿನ ಕಾಂತಿಯನ್ನು ವಿವಿಧ ಬಣ್ಣಗಳಿಂದ ರಂಜಿಸುವಂತೆ ಮಾಡುತ್ತದೆ. ಅದು ಆರೋಗ್ಯಕರವಾದ ಮಂದಮಾರುತವನ್ನು ಬೀರುತ್ತದೆ. ಬಗೆಬಗೆಯ ಮನೋಭಾವಗಳು, ನೈಜಸ್ವಭಾವಗಳು, ಆಶಾಭಾವನೆಗಳು, ಕೈಕೊಂಡಕಾರ್ಯಗಳು, ಇವುಗಳನ್ನು ಹಳೆಯ ಸಂಪ್ರದಾಯಕ್ಕನುಸಾರವಾಗಿ ಅಡಗಿಸಿಟ್ಟಿರುತ್ತೇವೆ.

ಈ ಹಿಂದಿನ ಕಾಲದ ಸೆಳೆತವು ಭಾರತೀಯ ತರುಣನ ಸಂಪೂರ್ಣತ್ರಾಣವನ್ನೇ ಶೋಷಿಸಿಬಿಟ್ಟಿದೆ. ಸಂಸಾರನಿರ್ವಹಣದಲ್ಲಿ ಬುದ್ಧಿಶಕ್ತಿಯನ್ನು ಕುಗ್ಗಿಸುವುದರಿಂದಲೂ, ಜಾತಿಮತಗಳ ದ್ವೇಷಾಸೂಯೆಗಳು ಉತ್ಸಾಹ ಮತ್ತು ಶಕ್ತಿಯನ್ನು ನಾಶಮಾಡುವುದರಿಂದಲೂ, ರಾಷ್ಟ್ರದ ಸೋಮಾರಿತನವು ಅವರ ಮನೋಭಾವಗಳನ್ನು ಕುಗ್ಗಿಸುವುದರಿಂದಲೂ, ಅವರ ಅಧೋಗತಿಯು ಇನ್ನಷ್ಟು ಅಧಿಕವಾಗುತ್ತದೆ. ರಾಷ್ಟ್ರದ ಆಶಾತರಂಗಗಳು ಅವರಲ್ಲಿ ಪ್ರತಿಬಿಂಬಿಸಿವೆ. ಅಲ್ಲದೆ ರಾಷ್ಟ್ರದ ನಿದ್ದೆಯಂತಿರುವ ಶಾಂತಿಯೂ, ಭ್ರಾಂತಿಯಿಲ್ಲದಿರುವಿಕೆಯೂ, ಹೆಚ್ಚು ಹೆಚ್ಚಾಗಿ ದುಷ್ಪರಿಣಾಮವುಳ್ಳದ್ದಾಗಿ ಕಾಣಿಸಿಕೊಳ್ಳುತ್ತಿವೆ. ಸಂಸ್ಕೃತಿಯೂ ಸತ್ಯ, ಧರ್ಮ ಮತ್ತು ಸೌಂದರ್ಯಗಳನ್ನು ಗೌರವಿಸುತ್ತದೆ. ನಮ್ಮ ಶಿಕ್ಷಣವು ಇವುಗಳ ಕಡೆಗೆ ಗಮನಕೊಟ್ಟಿದೆ. ವಿದ್ಯಾಭ್ಯಾಸವು ಇವುಗಳ ಪ್ರಾಮುಖ್ಯತೆಯನ್ನು ನಿರ್ಲಕ್ಷಿಸಿದೆ. ಜಾತಿಮತಗಳ ಮೂಢ ನಂಬಿಕೆಗಳು ಇವುಗಳನ್ನು ಉಪೇಕ್ಷೆಮಾಡಿವೆ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಆಂದೋಲನಗಳು ಇವುಗಳನ್ನು ಹತಮಾಡಿವೆ. ಈಗ ನಾವು ಜೀವನ್ಮೃತಿಯನ್ನು ಅನುಭವಿಸುತ್ತಿದ್ದೇವೆ. ನಾವು ಇಡೀ ವಿಶ್ವವನ್ನು ಒಂದು ನರಕವನ್ನಾಗಿ ಮಾಡಿದ್ದೇವೆ. ಭೂಮಿಯಂತೂ ಭೂತಗಳ ನಿವಾಸವಾಗಿದೆ. ಅದರಲ್ಲಿ ನಾವೇ ಭೂತಗಳಾಗಿದ್ದೇವೆ. ನೆರೆಮನೆಯಲ್ಲಿ ಕಷ್ಟದಿಂದ ಗೋಳಿಡುತ್ತಿದ್ದರೂ ನಾವು ಅವರಿಗೆ ಸಹಾಯಮಾಡಲು ಯತ್ನಿಸಿಯೇ ಇಲ್ಲ.

ಒಬ್ಬನು ಇನ್ನೊಬ್ಬನನ್ನು ಇರಿಯುತ್ತಿರುವುದನ್ನು ಕಿಟಕಿಯ ಮೂಲಕ ನೋಡಿದರೂ ನಾವು ನಿಶ್ಚಿಂತರಾಗಿದ್ದೇವೆ. ನಾವು ಕ್ಷಾಮ ಪೀಡಿತರ ದುರಂತ ಕತೆಗಳನ್ನೂ ಸರ್ವರ ನಾಶವನ್ನೂ ಕೇಳುತ್ತಿದ್ದಾಗ್ಯೂ ಯಥಾಪ್ರಕಾರ ಹಬ್ಬ ಹರಿದಿನಗಳನ್ನು ಮಾಡಿಕೊಂಡು ಸುಖ ಪಡುತ್ತಿದ್ದೇವೆ. ನಾವು ಒಂದು ನೂತನ ಯುಗದ ಪ್ರಾರಂಭದಲ್ಲಿ ಜೀವಿಸುತ್ತಿದ್ದೇವೆಂಬುವನ್ನೂ, ಆ ಯುಗದ ಪ್ರತಿ ಕ್ಷಣವೂ ಬಡಿದಾಟ ಕಾದಾಟಗಳಿಂದ ಕೂಡಿದೆ ಎಂಬುದನ್ನೂ ಇನ್ನೂ ತಿಳಿದಿಲ್ಲ. ಮಾನವ ಸಹೋದರ ಭಾವಗಳನ್ನು ಪುನಃ ಸ್ಥಾಪಿಸುವ ಮಹತ್ಕಾರ್ಯವು ನಮಗೋಸ್ಕರ ಕಾದಿದೆ. ಈ ಪ್ರಯತ್ನದಲ್ಲಿ ಜಯಶಿಲರಾಗದಿದ್ದರೆ ನಾಶವಾಗುವುದು ಖಂಡಿತ. ಚಾಡವಾಗುತದ ಅನಂತರ ಶಾಂತಿಯು ನೆಲಸುವಂತೆ ಈಗಣ ಪರಿಸ್ಥಿಯಲ್ಲಿ ಒಂದು ಕ್ರಾಂತಿಯನ್ನುಂಟು ಮಾಡಲು ಮಾಡಿದ ಪ್ರಯತ್ನಗಳು ವಿಫಲವಾದರೂ ಕೂಡ ಅನಂತರ ಶಾಂತಿ ಲಭಿಸುವುದೆಂಬುದನ್ನು ನಾವು ಕಂಡಿಲ್ಲವೆ? ಮಾನವನಲ್ಲಿ ನೆಲಸಿರುವ ದುರ್ನಡತೆಗಳನ್ನೂ ಪಶುತ್ವವನ್ನೂ ಸಂಪೂರ್ಣವಾಗಿ ನಾಶಮಾಡುವಾಗ ಬರಲಿರುವ ಮಹತ್ಕ್ರಾಂತಿಯ ಕದನದಲ್ಲಿ ನಾವೂ ಮುಂದಾಳುಗಳಾಗಿರಬೇಕಲ್ಲವೆ?

ಮಾನವನ ಇತಿಹಾಸದ ಈ ಘಟ್ಟದಲ್ಲಿ ನಾವು ಮುಂದಾಳುಗಳಾಗಿ ನುಗ್ಗದಿದ್ದರೆ ಸರ್ವನಾಶವು ಸಿದ್ಧವಾಗಿಯೆ ಇದೆ. ನಮ್ಮ ಸಾಮರ್ಥ್ಯದಲ್ಲಿ ಸ್ವಲ್ಪವೂ ಹಿಂಜರಿಯದೆ ಭರವಸೆಯನ್ನಿಟ್ಟು ಯಶಸ್ವಿಯಾದ ಭವಿಷ್ಯತ್ತನ್ನು ಪಡೆಯಲು ಯತ್ನಿಸಬೇಕು. ಇದು ಮಾನವನ ಯುಗ. ಈ ಯುಗದಲ್ಲಿ ಅಭ್ಯುದಯ, ಮಹದಾಕಾಂಕ್ಷೆ ಮತ್ತು ಅವುಗಳ ಸಿದ್ಧಿ ಇವುಗಳು ಜಯಪ್ರದವಾಗುತ್ತವೆ.

ಸಮ್ಮೇಳನಗಳೂ, ಗೋಷ್ಠಿಗಳೂ, ಹಳೆಯ ಸಾಮಾಜಿಕ ಸೇವಾರಚನೆಯನ್ನು ಸೂಚಿಸುತ್ತವೆ. ಪ್ರಚಾರದ ಕೂಗುಗಳೂ, ಪತ್ರಿಕೆಯ ಶಿರೋನಾಮೆಗಳೂ, ಸರ್ವಾಧಿಕಾರದ ರಾಜಕೀಯ ಮನೋಭಾವಗಳನ್ನು ಸೂಚಿಸುತ್ತವೆ. ಈ ಪ್ರಾಚೀನ ರೀತಿಗಳನ್ನೂ ಅನೈತಿಕ ಆಯುಧಗಳನ್ನೂ ನಿರ್ಮೂಲ ಮಾಡುವವರೆಗೂ ನಮ್ಮ ಭವಿಷ್ಯವು ನಾಶವಲ್ಲದೆ ಬೇರೇನೂ ಆಗಲಾರದು.

---

## ೪. ಹಳ್ಳಿಯ ಯುವಕ

ಭಾರತ ದೇಶದಲ್ಲಿ ಹಿಂದುಳಿದಿರುವ ಹಳ್ಳಿಯುವನನ್ನು ನವನಾಗರಿಕನು ಅನಾದರಣೆ ಮಾಡಿದ್ದಾನೆಂಬ ಸ್ವತಃಸಿದ್ಧವಾದ ವಾಸ್ತವಾಂಶವನ್ನು ನಾವು ಅನೇಕ ವೇಳೆ ಕೇಳಿದ್ದೇವೆ. ವಸ್ತುತಃ ನಾಗರಿಕರು ದೇಶದ ಅಭ್ಯುದಯ ವನ್ನು ಪ್ರಕಾಶಿಸಲು ಸಮರ್ಥರಾಗಿದ್ದಾರೆ. ಆದರೆ ಅದು ನಾಗರಿಕನ ಆತ್ಮ ಪ್ರಶಂಸೆ ಮತ್ತು ವ್ಯರ್ಥವಾದ ಆಡಂಬರಗಳಿಗೆ ಕಾರಣವಾಗಬಾರದು.

ಚರಕವು ಪಟ್ಟಣಕ್ಕೂ ಹಳ್ಳಿಗೂ ನಿಕಟಸಂಬಂಧವನ್ನು ಗಳಿಸುವುದೆಂಬ ಭರವಸೆಯಿರುವುದಾದರೂ ಆ ವಿಷಯದಲ್ಲನೇಕ ಸಭ್ಯರನ್ನು ಸಮಾಧಾನಮಾಡ ಬೇಕಾಯಿತು. ವಿಶ್ವಸೌಹಾರ್ದತೆಯ ಪ್ರಕಾಶಕರಾದ ಗುರುದೇವ ಕವೀಂದ್ರ ರವೀಂದ್ರನಾಥ ಠಾಕೂರರೂ ಸ್ವಲ್ಪ ಸಂಶಯಾವಿಷ್ಟರಾಗಬೇಕಾಯಿತು. ಸ್ವಾತಂತ್ರ್ಯಗೀತೆಯನ್ನು ಹಾಡುತ್ತಿರುವ ಮಹಾತ್ಮಾಜಿಯವರೂ ಕೂಡ ಒಂದು ಸತ್ಯಾಂಶವನ್ನು ಪುನರುಚ್ಚರಿಸಬೇಕಾಯಿತು. ೧೯-೫ರಲ್ಲಿ ಈ ಮಹಾತ್ಮರು ಕವೀಂದ್ರರಿಗೆ ಈ ರೀತಿಯಾಗಿ ಬರೆದರು. 'ಕವಿಯು ಅರ್ಧ ಗಂಟೆ ಕಾಲ ನಿತ್ಯವೂ ನೂತರೆ ಆತನ ಕಾವ್ಯವು ಇನ್ನೂ ಸೊಂಪಾಗಿರುತ್ತಿತ್ತು. ಯಾಕೆಂದರೆ ಆಗ ಅದು ದರಿದ್ರನ ಕಷ್ಟ-ನಷ್ಟಗಳನ್ನು ಮೊದಲಿನಕಿಂತಲೂ ಇನ್ನೂ ಬಲವಾಗಿ ತೋರ್ಪಡಿಸುತ್ತಿತ್ತು.'

'ಕಾಲವು ಬದಲಾಯಿಸುತ್ತಿದೆ. ನಾವು ಮತ್ತೆ ಹಿಂದಿನ ಪದ್ಧತಿಗಳಿಗೆ ಹೋಗಲಾರೆವು' ಎಂದು ಮನಸ್ವಿ ಹೇಳುವಷ್ಟು ಆತ್ಮಾಭಿಮಾನವು ಬೆಳೆದಿದೆ. ಹಳ್ಳಿಗಾಡಿನ ಜನರಲ್ಲಿ ಅಡಗಿರುವ ಮತ್ತು ರಾಷ್ಟ್ರನಿರ್ಮಾಣ ಕಾರ್ಯಕ್ಕೆ ಅವಶ್ಯವಾದ ಉತ್ಸಾಹ, ಅಂತಃಶಕ್ತಿ ಮತ್ತು ಕಾರ್ಯನಿರ್ವಹಣಾ ಸಾಮರ್ಥ್ಯ ಇವುಗಳನ್ನು ಅವನು ಸಂಪೂರ್ಣವಾಗಿ ಗಮನಿಸಲಿಲ್ಲ.

ಆದರೆ ಇದು ಏಕಪಕ್ಷೀಯವಾದ ತಿರಸ್ಕಾರವಾಗಲೀ ಅಥವಾ ದ್ವೇಷ ವಾಗಲೀ ಆಗಲಾರದು. ನಾಗರಿಕ ದುರಭಿಮಾನಿಯು ಗ್ರಾಮದ ದುರಂತವ ಆರ್ತನಾದಗಳಿಗೆ ಗಮನ ಕೊಡಲಾರನು. ನಾಗರಿಕ ಕವಿಯು ಅವರ ಜೀವ ನದ ಸುಖ-ದುಃಖಗಳನ್ನು ಹಾಡಲಾರನು. ಅದರಂತೆಯೇ ಹಳ್ಳಿಯವರೂ ಕೂಡ ಪಟ್ಟಣದ ಎಲ್ಲಾ ವಿಷಯಗಳಲ್ಲಿಯೂ ತಿರಸ್ಕಾರ ಭಾವನೆಯನ್ನು

ಹೊಂದಿರುತ್ತಾರೆ. ತಾವೇ ಶ್ರೇಷ್ಠರೆಂಬ ಒಂದು ಅಸ್ವಾಭಾವಿಕವಾದ ಭಾವನೆಯೇ ನಾಗರಿಕರ ಒಂದು ಚಿಹ್ನೆ. ಆತ್ಮೀಯವಾದ ವಸ್ತುಗಳಲ್ಲಿ ವಿಶೇಷ ಆಸಕ್ತಿಯೇ ಹಳ್ಳಿಯವರ ಕುರುಹು. ಪರಮತ ಸಹಿಷ್ಣುತೆಯೇ ಎಲ್ಲಾ ಮತಗಳ ಬೆನ್ನು ಮೂಳೆ. ಹಳ್ಳಿಯುವನು ಪಾಶ್ಚಾತ್ಯರ ಉಡುಪನ್ನು ಸಂದೇಹಾತ್ಮಕ ದೃಷ್ಟಿಯಿಂದ ನೋಡುತ್ತಾನೆಂದು ನಾವು ಭಾವಿಸಿದ್ದ ಕಾಲವೊಂದಿದ್ದಿತು. ಆದರೆ ಅದು ದ್ವೇಷದಿಂದ ಕೂಡಿದ ಸಂಶಯವೂ, ವೈರಯುಕ್ತವಾದ ಶಂಕೆಯೂ ಆಗಿದ್ದಿತು. ಆದರೆ ಇದು ಒಂದು ಶಕ್ತಿಯಂತೆ ಮುಂದುವರಿಯಲಾರದು. ಭಾರತದ ಗ್ರಾಮಗಳು ವಿಶ್ವದ ಸರ್ವತೋಮುಖವಾದ ಅಭಿವೃದ್ಧಿಯನ್ನು ನಿರ್ಲಕ್ಷಿಸಲಾರವು. ಅವರು ಅಕ್ಷರಸ್ಥರೂ, ವಿದ್ಯಾವಂತರೂ ಆಗಬೇಕು; ದಾರಿದ್ರ್ಯವನ್ನೂ, ಮೂಢ ನಂಬಿಕೆಯನ್ನೂ ಮೊದಲು ತ್ಯಜಿಸಬೇಕು. ನಿರರ್ಥಕವಾದ ಜವಾಬ್ದಾರಿಗಳನ್ನೂ ಅಪಾಯಕರವಾದ ಸನ್ನಿವೇಶಗಳನ್ನೂ ನಾವು ಎದುರಿಸಬೇಕಾಗುವುದು. ಈ ದುರ್ಮಾರ್ಗಗಳ ಗೊಂದಲದಿಂದ ಪಾರಾಗಿ ಭಾರತೀಯ ಗ್ರಾಮಗಳು ಉತ್ಸಾಹ ಚೈತನ್ಯಗಳಿಂದ ಕೂಡಿ ಜಾಗೃತಿಗೊಳ್ಳಬೇಕು. ನಾಗರಿಕ ಭಾರತದಷ್ಟೇ ಗ್ರಾಮಭಾರತವು ಧ್ಯೇಯರಹಿತವಾಗಿದೆ.

ಭಾರತದ ಗ್ರಾಮಾಂತರ ಪ್ರಜಾಕೋಟಿಯೇ ಭಾರತ ಅಥವಾ ಹಿಂದುಸ್ಥಾನ ಎನಿಸಿಕೊಳ್ಳುತ್ತಿದೆ. ಭಾರತದ ಆಶಾಕಿರಣಗಳು ಹಳ್ಳಿಗಳಲ್ಲಿಯೇ ಬೆಳಗುತ್ತವೆ. ಭಾರತದ ಪ್ರಜಾಕೋಟಿಯು ಇನ್ನೂ ದಾಸ್ಯದಲ್ಲಿರುವಾಗಲೇ ವಿಶ್ವ ಸ್ವಾತಂತ್ರ್ಯವೆಲ್ಲಿಯದು---ಎಂಬುದಾಗಿ ಸರಿಯಾಗಿಯೇ ಪ್ರತಿಪಾದಿಸಲ್ಪಟ್ಟಿದೆ. ಹಳ್ಳಿಯ ವಾತಾವರಣದಲ್ಲಿ ಸ್ವಾತಂತ್ರ್ಯದ ಜೀವಕಳೆಯಿಲ್ಲದಿದ್ದರೆ ಭಾರತದ ಸ್ವಾತಂತ್ರ್ಯವು ನಿಶ್ಚಯವಾಗಿಯೂ ಸಾಧ್ಯವಿಲ್ಲವೆಂದು ಒತ್ತಿ ಹೇಳಬಾರದೇ ? ಅವರು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯವನ್ನು ಹೊಂದಿಯೇ ತೀರಬೇಕು. ವಾಕ್ ಮತ್ತು ಮತೀಯ ಸ್ವಾತಂತ್ರ್ಯವನ್ನೂ ಕೊರತೆ ಮತ್ತು ಭಯಗಳಿಂದ ಪಾರಾಗುವಿಕೆಯನ್ನೂ ಅದೇ ರೀತಿ ವಾಸ್ತವಿಕವಾದ ಜೀವನದಲ್ಲಿ ಹೊಂದಬೇಕಾಗುತ್ತದೆ. ಇದು ಪರಸ್ಪರ ವಿರೋಧವಾಗಿ ತೋರಿ ಬಂದರೂ, ಅವರು ಈ ಸ್ವಾತಂತ್ರ್ಯವನ್ನು ತಮ್ಮ ನಿತ್ಯಜೀವನದಲ್ಲಿ ಹೊಂದಿ ಅನುಭವಿಸಲೇಬೇಕು.

ಇಂದು ಭಾರತೀಯ ಗ್ರಾಮವಾಸಿಗಳು ಕೊಳೆ ಮತ್ತು ಜಾಡ್ಯ ಗಳಿಂದಲೂ, ಹೊಲಸು ಮತ್ತು ದಾರಿದ್ರ್ಯಗಳಿಂದಲೂ, ಪೀಡಿತರಾಗಿ ಅಧೋ ಗತಿಯಲ್ಲಿದ್ದಾರೆ. ರೋಗವೂ, ವಾಯುಗುಣವೂ ಭಾರತೀಯ ಗ್ರಾಮ ವಾಸಿಗಳನ್ನು ದಾರಿದ್ರ್ಯದಿಂದ ನಿರ್ಜೀವ ಸ್ಥಿತಿಗೂ, ಉಪೇಕ್ಷೆಯಿಂದ ಉದಾ ಸೀನತೆಗೂ, ಪರಾಧೀನತೆಯಿಂದ ಅದೃಷ್ಟವಾದಕ್ಕೂ ದೂಡುತ್ತವೆ. ಅವನ ದಾರಿದ್ರ್ಯವನ್ನೂ, ದುರದೃಷ್ಟವನ್ನೂ ನಾವು ಹೆಚ್ಚಿಗೆ ಮನಸ್ಸಿಗೆ ಹಚ್ಚಿಕೊಳ್ಳ ಬೇಕಾದುದಿಲ್ಲ. ಅವನಲ್ಲಿ ಬುದ್ಧಿಶಕ್ತಿ, ದೂರದೃಷ್ಟಿ, ವಿವೇಚನೆ ಮತ್ತು ಎದೆಗಾರಿಕೆಗಳು ಇಲ್ಲದಿರುವುದಕ್ಕಾಗಿ ನಾವು ವಿಷಾದಿಸಬೇಕಾಗಿದೆ. ವಿಶೇಷ ಬುದ್ಧಿಶಕ್ತಿಯೂ, ಅತ್ಯಂತ ವೈಭವವೂ, ಭಾರತೀಯ ಯಶಸ್ಸಿನಲ್ಲಿ ತಾಳ್ಮೆಗೆ ದಾರಿ ಮಾಡಿಕೊಟ್ಟವೆ. ಭಾರತವೆಂಬ ಪದವೇ 'ಸಿರಿನಾಡು' ಎಂಬ ಅರ್ಥ ವನ್ನು ಸೂಚಿಸುತ್ತಿತ್ತು. ಉದಾಸೀನತೆಯು ಅಸಹ್ಯವಾದ ಜನಸಂಖ್ಯೆಯ ಅಭಿವೃದ್ಧಿಗೆ ಹೇಗೆ ಕಾರಣವಾಯಿತೋ, ಹಾಗೆಯೇ ಅಸಹನೆಯು ಕೂಡ ಅನೇಕ ಅಪಾಯಕರ ದ್ವೇಷಗಳಿಗೆ ಮೂಲವಾಯಿತು. ಐಶ್ವರ್ಯ ಮತ್ತು ಸೌಖ್ಯಗಳಲ್ಲಿ ಅವನಿಗಿದ್ದ ಜಿಗುಪ್ಸೆಯು ಅವನನ್ನು ವಿರಕ್ತನನ್ನಾಗಿ ಮಾಡ ಲಿಲ್ಲ, ದುರ್ವ್ಯಯಿಯನ್ನಾಗಿ ಮಾಡಿತು.

ನಮ್ಮಲ್ಲಿ ಅನೇಕರು ಪೂರ್ವಿಕರಿಂದ ಅನೂಚಾನವಾಗಿ ಬಂದ ಅರ್ಥ ವಿಲ್ಲದ ಪದ್ಧತಿಗಳನ್ನು ಕ್ರಮಪಡಿಸಲು ಸಹಕರಿಸಿ ಪ್ರಯತ್ನಪಟ್ಟಿದ್ದಾರೆ. ಈ ಪ್ರಯತ್ನಗಳು ಇಂದಿಗೂ ಬಲವಾಗಿಯೇ ಇವೆ. ಗ್ರಾಮನಿವಾಸಿಗಳ ಹಿಂದುಳಿ ದಿರುವಿಕೆಗೆ ಪ್ರಾಚೀನ ಪದ್ಧತಿಗಳ ಉತ್ಪ್ರೇಕ್ಷೆಯೇ ಮುಖ್ಯ ಕಾರಣ.

ಗ್ರಾಮನಿವಾಸಿಯೆಂದರೆ ಭಾರತ. ಭಾರತವೇ ಗ್ರಾಮನಿವಾಸಿಗಳ ಪ್ರತಿಬಿಂಬ. ಭಾರತದ ಅಭಿವೃದ್ಧಿಯು ಪ್ರಗತಿಶೀಲ ರಾಷ್ಟ್ರದಂತೆ ಮುಂದು ವರಿದಿಲ್ಲ; ನಾವೂ ಸಹ ಸ್ವಾಭಿಮಾನಿಗಳಂತೆ ಮುಂದುವರಿದಿಲ್ಲ. ಈ ವಿಷಯ ವನ್ನು ದಾಸ್ಯದಲ್ಲಿರುವ ಗ್ರಾಮನಿವಾಸಿಯು ಗಮನಿಸದಿರುವುದೇ ಕಾರಣ ವಾಗಿದೆ. ಗ್ರಾಮನಿವಾಸಿಯು ಒರಟಾದ ಮತ್ತು ನಿಸ್ಸಹಾಯಕವಾದ ಸ್ಥಿತಿಗೆ ಮಾರ್ಪಟ್ಟಿರುವುದು ತುಂಬಾ ಶೋಚನೀಯವಾದ ವಿಷಯ. ಭಾರತೀಯ ಪ್ರಜಾಸಮೂಹವು ಇನ್ನೂ ಮುಂದುವರಿಯಲು ಸಾಧ್ಯವಾಗದಂತಹ ಅಂತಿಮ ಸ್ಥಿತಿಗೆ ಬಂದುಬಿಟ್ಟಿದೆ. ಈ ಶೋಚನೀಯವಾದ ಸ್ಥಿತಿಗೆ ಅವರು

ಬಲಾತ್ಕಾರದಿಂದ ದೂಡಲ್ಪಟ್ಟು, ಹೊರಗೆ ಬರಲು ಇಷ್ಟವಿಲ್ಲದವರಾಗಿದ್ದಾರೆ. ಅವರಿಗೆ ಬಾಹ್ಯಪ್ರಪಂಚದ ಏಳಿಗೆಯ ಅರಿವೇ ಇಲ್ಲ.

ಅದು ಕೇವಲ ಕೂಪಕೂರ್ಮ ನ್ಯಾಯವಲ್ಲ. ಅದು ಇನ್ನೂ ಹೆಚ್ಚು ಸಾರವತ್ತಾಗಿಯೂ, ಫಲದಾಯಕವಾಗಿಯೂ ಮತ್ತು ದೈವಿಕವಾಗಿಯೂ ಇದೆ. ಗ್ರಾಮನಿವಾಸಿಗಳ ಮತಾಚಾರಸಂಪನ್ನತೆಯು ಅವರ ನೈಸರ್ಗಿಕ ಲಕ್ಷಣವಾಗಿದೆ. ಸಾಮಾನ್ಯವಾಗಿ ಪ್ರತಿಯೊಬ್ಬರ ಯೌವನವು ತನ್ನ ೩ಂನೆಯ ವಯಸ್ಸಿನೊಳಗೇ ಇರುತ್ತದೆ. ಆ ಸಮಯವೇ ಅವನು ತನ್ನ ಜೀವನದಲ್ಲಿ ಅವ್ಯವಸ್ಥಿತನಾಗಿರುವ ಕಾಲ. ನೆರೆಯವರು ಅವನನ್ನು ಸ್ವಾರ್ಜಿತ ಜೀವಿಯಾಗಲು ಶಕ್ತನಾಗಿದ್ದರೂ ಪರೋಪಜೀವಿಯೆಂದು ನಿರ್ದೇಶಿಸುತ್ತಾರೆ. ಮಾನಸಿಕ ಅಶಾಂತಿಯುಂಟಾಗಿ ಅವನು ತಾನು ಕೇವಲ ಯುವಕನೆಂದೇ ಭಾವಿಸುತ್ತಾನೆ. ಆದರೆ ಅವನ ಹಿರಿಯರು ಅವನ ತಲೆಯ ಮೇಲೆ ಜವಾಬ್ದಾರಿಯನ್ನು ಹೊರಿಸಿ ಅವನನ್ನು ಮತಿಹೀನನನ್ನಾಗಿ ಮಾಡುತ್ತಾರೆ. ಈ ಆರ್ಥಿಕ ಸಮಸ್ಯೆಯು ವಯೋವೃದ್ಧರಿಗೆ ಒಂದು ಅವಕಾಶವನ್ನು ಕಲ್ಪಿಸಿ ಯುವಕನನ್ನು ನೈತಿಕ ಮತ್ತು ಸಾಮಾಜಿಕ ದಾಸ್ಯಕ್ಕೆ ಒಳಗಾಗುವಂತೆ ಮಾಡುತ್ತದೆ. ಅನೇಕ ತರುಣರು ಈ ಶಕ್ತಿಗೆ ಬಲಿಯಾಗುತ್ತಾರೆ. ಇದು ಯುವಕರ ಬುದ್ಧಿಶಕ್ತಿ, ಗ್ರಹಣಶಕ್ತಿ ಮತ್ತು ಕಾರ್ಯನಿರ್ವಹಣ ಶಕ್ತಿ, ಇವುಗಳ ಪರೀಕ್ಷಾಕಾಲವಾಗಿದೆ. ಈ ಸ್ಪರ್ಧೆಯಲ್ಲಿ ಉತ್ತೀರ್ಣರಾಗಲು ಮಿತಿ ಮೀರಿ ಪ್ರಯತ್ನಪಡುತ್ತಾರೆ. ಇದು ಅವನನ್ನು ಜಯದಿಂದ ಪರಾಜಯಕ್ಕೆ ದೂಡುತ್ತದೆ. ಆದರೂ ಈ ಹೋರಾಟವು ಅವನಿಗೆ ಆದರಣೀಯವಾಗಿಯೇ ಇರುತ್ತದೆ. ಏಕೆಂದರೆ ಅವನ ಶಕ್ತಿಸಾಮರ್ಥ್ಯಗಳು ಆಮೂಲಾಗ್ರವಾಗಿ ಇಲ್ಲಿ ಪರೀಕ್ಷಿಸಲ್ಪಡುತ್ತವೆ. ಆತ್ಮವಿಕಾಸದ ಪ್ರೇರಣೆಯುಂಟಾಗಿ ನವಚೈತನ್ಯಗಳು ಹೊರಚಿಮ್ಮುವ ಅವಕಾಶವುಂಟಾಗುವುದು. ಆದರೆ ಗ್ರಾಮ ಯುವಕನಲ್ಲಿ ಈ ವಿಧವಾದ ಅನುಭವಗಳು ಉಂಟಾಗಲಾರವು. ಕೇವಲ ಬಾಲ್ಯಾವಸ್ಥೆಯಿಂದಲೇ ಕುಲಕ್ರಮವಾಗಿ ಬಂದ ಕಸುಬುಗಳನ್ನು ಅವನು ಕೈಕೊಳ್ಳಬೇಕಾಗುವುದು. ಇದಕ್ಕೆ ತಡೆಯಾಗಲೀ ಹೋರಾಟವಾಗಲೀ ಇಲ್ಲ. ಜೀವನ ಯಾತ್ರೆಯು ಸುಗಮವಾಗಿ ಹರಿದು, ಅಜ್ಞಾನ ಮತ್ತು ಜಡತ್ವದಲ್ಲಿ ಸಮಾಧಾನವನ್ನು ಹೊಂದುತ್ತದೆ. ಬಹುಶಃ ಹಳ್ಳಿಯ ಯುವಕನು ಾರ ಗಣ

ನೆಗೂ ಬಂದಂತಿಲ್ಲ. ಅವನ ಇರುಪಿಕೆಯ ಅರಿವೇ ಯಾರಿಗೂ ಇಲ್ಲದಂತಿದೆ.

ಈ ಪ್ರಕಾರವಾಗಿ ಹಳ್ಳಿಯ ಯುವಕನು ನಾಗರಿಕ ಯುವಕನಿಗಿಂತ ಬಹು ವ್ಯತ್ಯಾಸವನ್ನು ಹೊಂದಿರುತ್ತಾನೆ. ವಿದ್ಯೆ, ಭಾಷೆ, ಆಚಾರ ಮತ್ತು ಎಲ್ಲಕ್ಕೂ ಮಿಗಿಲಾಗಿ ಸಂಸ್ಕೃತಿ ಇವುಗಳಲ್ಲೆಲ್ಲಾ ಅವರು ಸಂಪೂರ್ಣವಾಗಿ ಪರಸ್ಪರ ವ್ಯತ್ಯಸ್ತರಾಗಿರುತ್ತಾರೆ. ಪ್ರತಿಯೊಬ್ಬರಲ್ಲಿಯೂ ಗುಣಾವಗುಣ ಗಳು ಇದ್ದೇ ಇರುವವು. ಹಾಗೆಯೇ ಒಂದು ರಾಷ್ಟ್ರವೂ ಕೂಡ ಬಲಾಬಲ ಗಳನ್ನುಳ್ಳದ್ದಾಗಿದೆ. ಆರೋಗ್ಯ, ಭಾಗ್ಯ, ಸೌಂದರ್ಯ, ಸುಗುಣಾದಿ ವಿಷಯ ಗಳಲ್ಲಿ ರಾಷ್ಟ್ರದ ಏಳಿಗೆಗೆ ಸಹಾಯಕಗಳಾದ ಆರ್ಥಿಕ ಮತ್ತು ಸಾಮಾಜಿಕ ಪ್ರೇರಣೆಗಳಲ್ಲಿ ಅನುಕೂಲವಾದ ಸಾಮ್ಯವೂ ಮತ್ತು ಮೇಲೆ ಹೇಳಿದ ಗುಣ ದೋಷಗಳಿಗೆ ಪರಸ್ಪರ ಫಲದಾಯಕವಾದ ಸಮತ್ವ ಭಾವನೆಯೂ, ಈ ಜಟಿಲಸಮಸ್ಯೆಗೆ ತಕ್ಕ ಪರಿಹಾರವಾಗಿದೆ.

---

## ೫. ಮತಧರ್ಮ ಮತ್ತು ಒಣಹೆಮ್ಮೆ.

ಮಾನವನ ದುರ್ಬಲವಾದ ಆತ್ಮಪರಾಧೀನತೆಯ ಇತಿಹಾಸಕ್ಕೆ ಈ ಮತಧರ್ಮ ಮತ್ತು ಒಣಹೆಮ್ಮೆಗಳೇ ಮೂಲಾಧಾರಗಳೆಂದು ಹೇಳಬಹುದು. ಅನೇಕ ವರ್ಷಗಳ ಹಿಂದೆ ಮಾನವನು ತನ್ನ ವಿವೇಚನಾಶಕ್ತಿಯನ್ನರಿತು ತದನಂತರ ತನ್ನ ಅಭಿಪ್ರಾಯವನ್ನು ಪದಗಳ ಮೂಲಕ ವ್ಯಕ್ತಪಡಿಸಲು ಸಮರ್ಥನಾದಾಗ ಈ ಮಹಾಶಕ್ತಿಯ ಅರಿವು ಅವನಿಗೆ ಗೋಚರವಾಗಲಿಲ್ಲ. ಪ್ರಜಾಕೋಟಿಯನ್ನು ಕಷ್ಟಕರವಾದ ಸಾಹಸಕೃತ್ಯಗಳಿಗೆ ವಿದ್ಯುದ್ವೇಗದಿಂದ ಪ್ರಚಲಿಸಿದಂತಹ ಈ ವಕ್ರಶಕ್ತಿಯ ಬಲಾಬಲಗಳನ್ನು ಈ ಅಧ್ಯಾಯದಲ್ಲಿ ವಿಮರ್ಶಿಸುವುದು ನಮ್ಮ ಕರ್ತವ್ಯ. ಅನಾದಿಯಿಂದಲೂ, ಮಾನವನ ಮನ ಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಬಾಹ್ಯಶಕ್ತಿಯ ಅರಿವು ಉಂಟಾದಾಗ ಅವನು ತನ್ನಲ್ಲಿ ಶಾರೀರಿಕ, ಮಾನಸಿಕ ಮತ್ತು ಬುದ್ಧಿ ಸಂಬಂಧವಾದ ದೌರ್ಬಲ್ಯವನ್ನು ಹೊರಗೆಡವುತ್ತಿದ್ದನು. ಈ ಮನೋ ಭಾವನೆಯು ಅವನಲ್ಲಿ ಸಾಹಸ ಕೃತ್ಯಗಳಿಗೆ ಕೈಹಾಕುವಂತೆ ಪ್ರೇರೇಪಿಸುವ

ಸ್ವಚ್ಛಂದ ಶಕ್ತಿಯನ್ನು ಉಂಟುಮಾಡುವುದಕ್ಕೆ ಬದಲು ಅಪಕರ್ಷಕ ಪರಿಣಾಮಕಾರಿಯಾಗಿದೆ. ಅವನಲ್ಲಿ ಪ್ರಬಲವಾದ ಆತ್ಮಶಕ್ತಿಯನ್ನುಂಟು ಮಾಡುವ ಬದಲು ದಾಸ್ಯದಲ್ಲಿಯೂ, ನಿಷ್ಫಲ ಪ್ರಯತ್ನಗಳಲ್ಲಿಯೂ ಮತ್ತು ಆಡಂಬರಾಚಾರಗಳಲ್ಲಿಯೂ ತೋರ್ಪಡಿಸಿಕೊಳ್ಳುವ ಹೇಯವಾದ ಮನೋಭಾವನೆಯನ್ನು ಉಂಟುಮಾಡಿತು. ಇದು ಮೂಢಾಚಾರಗಳಿಗೂ ಬಾಹ್ಯಾಡಂಬರಗಳಿಗೂ, ಉತ್ತೇಜನಕಾರಿಯಾಯಿತು, ನಿಜವಾಗಿಯೂ ಈ ಉತ್ತೇಜಕ ಶಕ್ತಿಯು ಆಯಾಯ ವ್ಯಕ್ತಿಗಳನ್ನೂ, ಸಂಘಗಳನ್ನೂ ಸಮಾಧಾನಪಡಿಸಲು ತೊಡಗಿತು. ಇದರ ಪರಿಣಾಮವಾಗಿ ಎಲ್ಲವೂ ತೃಪ್ತಿ ಹೊಂದಿ, ನೂರಾರು ವರ್ಷಗಳ ವಿಶ್ವದ ಇತಿಹಾಸವು ಮತ್ತೆ ಮತ್ತೆ ಪುನರುಕ್ತವಾದಂತಾಯಿತು. 'ವ್ಯಕ್ತಿಸೌಖ್ಯವೇ ಪ್ರಶಾಂತ ಜೀವನದ ಒರೆಗಲ್ಲು' ಎಂಬುದನ್ನು ಯಾರೂ ವಿರೋಧಿಸಲಾರರು. ಹಾಗೆಯೇ ನಾವೂ ಸಹ ಮಾನವ ಕೋಟಿಯ ಸೌಖ್ಯವೂ ಕೂಡ ಒಂದು ಸಂಘದ ಯೋಗಕ್ಷೇಮಕ್ಕೆ ಕಾರಣವೆಂಬುದನ್ನು ಮರೆಯಲಾರೆವು. ಆದರೆ, ಬಾಹ್ಯಾಡಂಬರಕ್ಕೆ ಈಡುಮಾಡಿದ ಈ ದಾಸ್ಯಮನೋಭಾವನೆಯೂ ಮತ್ತು ದೈವೀ ಬಲಕ್ಕೆ ಪರಾಧೀನವಾಗಿರುವಿಕೆಯೂ ಹೇಗೆ ಅಪಾಯಕರವಾದ ಫಲಗಳನ್ನು ಕೊಡುವುದು ಎಂಬುದನ್ನು ಸ್ಥೂಲ ದೃಷ್ಟಿಯಿಂದ ನೋಡಬಹುದು.

ಪ್ರಪಂಚದ ಕ್ರಾಂತಿಕಾರರು ಈ ನವಯುಗವನ್ನು ಕೇವಲ ಭೌತಿಕ ಯುಗವೆಂದು ವರ್ಣಿಸಿದ್ದಾರೆ. ಅಪಾಯಕರವಾದ ಅಭಿಪ್ರಾಯಗಳಿಗೆ ಮೇಲ್ಮುಸುಕಿನಂತಿರುವ ನವಕಲ್ಪನೆಗಳನ್ನು ನಾವು ಒಪ್ಪಿಕೊಳ್ಳಬಹುದು. ಏಕೆಂದರೆ ಮಾನವನು ಈಗಿರುವ ಹಾಗೆ ಯಾವಾಗಲೂ ದುರಾಶಾಪರನೂ, ಐಹಿಕ ಸುಖಾಭಿಲಾಷಿಯೂ ಆಗಿರುತ್ತಾನೆ. ಮತೀಯ ಸ್ಫೂರ್ತಿ ಅಥವಾ ಆಮುಷ್ಮಿಕ ಚಿಂತನೆಗಳು ಕೇವಲ ಕ್ಷಣಿಕವಾಗಿಯೂ ತಾತ್ಕಾಲಿಕವಾಗಿಯೂ ಇದ್ದರೂ ದೌರ್ಬಲ್ಯದಿಂದ ಕೂಡಿದ ಶಕ್ತಿಯಾಗಿರುತ್ತದೆ. ವಿಶ್ವದ ಇತಿಹಾಸದ ಪ್ರಾರಂಭದಲ್ಲಿ ಮಾತ್ರವೇ ಮಾನವನು ಅಜ್ಞಾನಾಂಧಕಾರದಲ್ಲಿ ಮುಳುಗಿದ್ದನು. ಆ ಸಮಯದಲ್ಲಿಯೇ ಮತಧರ್ಮವು ಅವನನ್ನು ಕಾರ್ಯತತ್ಪರನನ್ನಾಗಿ ಪ್ರೇರೇಪಿಸಿತು. ಆದರೆ ಈಗ ಅದು ಕೇವಲ ನಿಸ್ಸಹಾಯಕವಾದ ಕ್ರಿಯಾರೀತಿಯಾಗಿ ಪರಿಣಮಿಸಿದೆ. ಜಾನ್ ಮಿಡಲ್‌ಟನ್ ಮರಿ

ಎಂಬ ಗ್ರಂಥಕರ್ತನು ಈ ಪ್ರಕಾರವಾಗಿ ಹೇಳಿದ್ದಾನೆ— "ನಮಗೆ ಈಗ ಅವಶ್ಯವಾಗಿ ಬೇಕಾಗಿರುವುದೆಂದರೆ ಕ್ರೈಸ್ತ ಮತೀಯ ಸಂಸ್ಥೆಗಳು ಮತ್ತು ಅದರ ನಿಯಮ, ಆಚಾರ ಮತ್ತು ಪ್ರಾರ್ಥನಾಪದ್ಧತಿಗಳು. ಇವೇ ನಮ್ಮವು." ನಮ್ಮ ರಾಷ್ಟ್ರದಲ್ಲಿ ಮಹಾತ್ಮಾ ಗಾಂಧಿ ಮತ್ತು ಇತರರನೇಕರು ಇದೇ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ. ಈ ಪ್ರಾಜ್ಞರು ವಿಜ್ಞಾನ ಮತ್ತು ವೈಜ್ಞಾನಿಕ ಚಿಂತನೆ, ವಿವೇಚನಾಶಕ್ತಿ ಮತ್ತು ಸದಾಚಾರ ಸಂಪನ್ನತೆ ಇವು ಸುಖಜೀವನಕ್ಕೆ ವಿರುದ್ಧವೆಂದು ಮತ್ತೆ ಮತ್ತೆ ಸೂಚಿಸಿದ್ದಾರೆ. ಮೆಸರಿಕ್ ಎಂಬ ಗ್ರಂಥಕರ್ತನು "ನಮಗೆ ಗೊತ್ತಿಲ್ಲ" ಎಂಬುದೇ ವಿಜ್ಞಾನದ ಲಕ್ಷಣವೆಂದು ಸೂಚಿಸಿದ್ದಾನೆ. ಇದಕ್ಕಿಂತಲೂ ದಾರಿ ತಪ್ಪಿಸುವಂತಹದು ಬೇರೊಂದಿಲ್ಲ. ಏಕೆಂದರೆ—ವಿಜ್ಞಾನವು— 'ನಾವು ತಿಳಿದುಕೊಳ್ಳೋಣ' ಎಂದು ಹೇಳುತ್ತದೆ. ಕೇವಲ ಮತಧರ್ಮವೇ ಮಾನವನಲ್ಲಿ ವೇದಾಂತದ ಹಕ್ಕುಗಳನ್ನು ತಿರಸ್ಕರಿಸಿ, ಅಜ್ಞಾನ ಮತ್ತು ಜಡತ್ವವನ್ನು ಅಭಿವೃದ್ಧಿಗೊಳಿಸಿ ಬಾಹ್ಯ ಪ್ರೇರಣೆಗಳಿಂದ ಅವನನ್ನು ನಿಸ್ಸಹಾಯಕನನ್ನಾಗಿ ಮಾಡುತ್ತದೆ. ಆಧುನಿಕ ಮಾನವನು ಆತ್ಮಾಪಘಾತಿಯೆಂದು ಮೆಸರಿಕ್ ಎಂಬಾತನು ಮತ್ತೆ ಮತ್ತೆ ವಿವರಿಸುತ್ತಾನೆ. ಈ ಆತ್ಮಹತ್ಯೆಯು ನವನಾಗರಿಕತೆಯ ಸಾಮಾಜಿಕ ಬೇನೆಯೆಂದು ಅವನು ಅಭಿಪ್ರಾಯಪಟ್ಟಿದ್ದಾನೆ. ಇದು ಖಂಡಿತವಾಗಿಯೂ ಕಟುತರವಾದ ಸಮಸ್ಯೆಯಾಗಿದೆ. ಮತ್ತು ಒಂದು ವೇಳೆ ಇದು ನಿಜವಾದರೂ ನಮ್ಮನ್ನು ಅವನತಿಗೆ ಈಡು ಮಾಡುವ ಜಡತ್ವಕ್ಕಿಂತ ಈ ಸಾಹಸವಾದ ಆತ್ಮಹತ್ಯೆಯೇ ಲೇಸೆಂದು ನಾವು ಪರಿಗಣಿಸಬಹುದು.

ನಿಃಸ್ವಾರ್ಥ ಜೀವನವನ್ನು ನಾವು ಕೈಗೊಳ್ಳಬೇಕೆಂದು ನಮಗೆ ಪ್ರೋತ್ಸಾಹ ದೊರೆಯುತ್ತಿದೆ. ನಮ್ಮ ಮತಧರ್ಮಗಳು, ಮತಗ್ರಂಥಗಳು, ಧರ್ಮೋಪದೇಶಕರು ಮತ್ತು ಸಾಮಾಜಿಕ, ರಾಜಕೀಯ ಪ್ರಾಜ್ಞರು ನಮಗೆ ಈ ರೀತಿಯಾದ ತ್ಯಾಗ ಜೀವನವನ್ನು ಬೋಧಿಸಿದ್ದಾರೆ. ಪ್ರತಿಯೊಬ್ಬನ ಐಹಿಕ ಸುಖವನ್ನು ಮತ್ತು ಸರ್ವತೋಮುಖವಾದ ನಂಬಿಕೆಯ ಅರಿವನ್ನು ಸಾಧಿಸಿದ ಹೊರತೂ ಈ ವಿಧವಾದ ನಿಃಸ್ವಾರ್ಥ ಜೀವನವು ಹಾಸ್ಯಾಸ್ಪದವಾಗುತ್ತದೆ.

ಅನೇಕ ಪ್ರಾಜ್ಞರು ಸರ್ವಸಾಮಾನ್ಯವಾದ ಆತ್ಮಾಭಿಮಾನದ ಜೀವನ ಮತ್ತು ನಿಃಸ್ವಾರ್ಥಜೀವನ ಇವೆರಡಕ್ಕೂ ಇರು ವಪರಸ್ಪರ ವಿಲಕ್ಷಣಗಳನ್ನು ಸೂಕ್ಷ್ಮವಾಗಿ ಸೂಚಿಸಿದ್ದಾರೆ. ತತ್ವಜ್ಞಾನದಲ್ಲಿ ಕುಶಲಿನಿಯಾದ ಲಿಲೀ ಹೆಬರ್ ಎಂಬಾಕೆಯು "ಅನುಭವದ ಕಳವಳ, ದುರಾಶೆಯ ಬಾಹುಲ್ಯ ಮತ್ತು ಮಾನಸಿಕ ವಂಚನೆ" ಇವು ವೈಯಕ್ತಿಕ ಕ್ರೂರ ಒಣ ಹೆಮ್ಮೆಯಿಂದ ಪ್ರೋತ್ಸಾಹವನ್ನು ಪಡೆಯುತ್ತಿವೆಯೆಂದು ವಿವರಿಸಿದ್ದಾಳೆ. ಆತ್ಮಾಭಿಮಾನ ಜೀವನವು ಸಾಮರಸ್ಯ ಮತ್ತು ನಿರ್ವಿಕಾರತೆಗಳ ಆಧಾರದ ಮೇಲೆ ನಿಂತಿದೆ ಯೆಂದು ಸ್ಪಷ್ಟೀಕರಿಸಿದ್ದಾಳೆ. ಸರಾಗವಾಗಿಯೂ, ಉತ್ಪಾದಕವಾಗಿಯೂ, ಮಾರ್ಗದರ್ಶಕವಾಗಿಯೂ ಇರುವುದೇ ನಿಃಸ್ವಾರ್ಥ ಜೀವನ. ಸಾಮಾನ್ಯ ಮಾನವನು ಆತ್ಮಾಭಿಮಾನಿಯೂ ರಾಕ್ಷಸನೂ ಆಗಿದ್ದಾನೆ, ಎಂಬುದೇ ಆಕೆಯ ವಾದ. ಇವುಗಳೆಲ್ಲಾ ಐತಿಹಾಸಿಕ ಅಥವಾ ಇತರ ಆಧಾರಗಳಿಂದ ಸಾಧಿಸಲು ಸಾಧ್ಯವಾಗದಂತಹ ಕ್ಲಿಷ್ಟಪದಗಳು. ಯಾವಾಗ ಮಾನವನು ತನ್ನ ಮತ್ತು ತನ್ನೊಡನಾಡಿಗಳ ಐಹಿಕ ಮತ್ತು ಸೌಂದರ್ಯದ ಅಭಿವೃದ್ಧಿ ಯನ್ನು ಅರಿಯುವನೋ ಆ ಕ್ಷಣದಲ್ಲಿಯೇ ಅವನು ಸಂಪೂರ್ಣವಾಗಿ ಬೆಳೆದು ಶಾರೀರಿಕ ಜಡತ್ವದಿಂದ ಉದ್ಧೃತನಾಗುವನು, ಎಂಬುದೇ ನಾವು ಇತಿಹಾಸ ದಿಂದ ಕಲಿಯುವ ಪಾಠ. ತ್ಯಾಗಜೀವನದ ಸತ್ಪರಿಣಾಮಗಳನ್ನು ಕೀಳು ದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ. ಅಭಿಮಾನಪೂರ್ಣ ಜೀವನದ ಸತ್ಪರಿಣಾಮಗಳನ್ನು ಗಣನೆಗೆ ತಂದುಕೊಳ್ಳದಿರುವುದು ನಿಷ್ಪ್ರಯೋಜಕ ವಾಗಿದೆ. ಈ ಎರಡು ಭಾವನೆಗಳ ಸಂಪೂರ್ಣತೆಯನ್ನು ಸರ್ವತೋಮುಖ ವಾಗಿ ಪರಿಶೀಲಿಸುವುದೇ ಇಂದಿನ ಅವಶ್ಯಕತೆ. ನಮ್ಮ ದೈನಂದಿನ ಜೀವನ ವನ್ನು ಆಧ್ಯಾತ್ಮಿಕವನ್ನಾಗಿಯೂ, ಆಧ್ಯಾತ್ಮಿಕ ಜೀವನವನ್ನು ಸಫಲವನ್ನಾ ಗಿಯೂ ಮಾಡುವುದು ಅತ್ಯಗತ್ಯ.

ನಮ್ಮ ಪ್ರಗತಿಯನ್ನು ತಡೆಯುವ ಇನ್ನೊಂದು ಅಡ್ಡಿಯೆಂದರೆ ಒಂದು ಪಂಗಡದವರ ಕಲ್ಪಿತಶ್ರೇಷ್ಠತೆ. ಪ್ಲೇಟೋ ಎಂಬ ತತ್ವಜ್ಞಾನಿಯು ತತ್ವಜ್ಞಾನಿಗಳೇ ರಾಜ್ಯವನ್ನು ಆಳುವುದಕ್ಕೆ ಅರ್ಹರಾದವರು ಎಂದು ಭಾವಿಸಿದ್ದನು. ಈಗಲಾದರೋ ವಯೋವೃದ್ಧನಾದ ಜಾರ್ಜ್ ಬರ್ನಾರ್ಡ್‌ಷಾ ಎಂಬ ಮಹಾಶಯನು ಅದೇ ರೀತಿಯ ಅಭಿಪ್ರಾಯವನ್ನು ಮುಂದಿಡುತ್ತಿ

ದ್ದಾನೆ. ಮಾನವೇತಿಹಾಸದ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಜನಗಳ ತಂಡಗಳು ತಮ್ಮದೇ ಆದ ಸಂಪೂರ್ಣ ಅಧಿಕಾರಕ್ಕಾಗಿ ತಮ್ಮ ಹಕ್ಕುಬಾಧ್ಯತೆಗಳನ್ನು ಮುಂದಿಟ್ಟಿದ್ದಾರೆ. ಈಗಿನ ಕಾಲದಲ್ಲಿ ಎಲ್ಲಾ ಬಗೆಯ ಜೀವನಮಾರ್ಗದಲ್ಲಿಯೂ ಈ ತೆರನಾದ ಚಿತ್ತವೃತ್ತಿಯು ಗೋಚರವಾಗುತ್ತಿದೆ. ಕವಿಗಳು, ಪ್ರಾಜ್ಞರು, ಮಠಾಧಿಪತಿಗಳು, ಕೈಗಾರಿಕಾನಾಯಕರು, ಅರ್ಥಶಾಸ್ತ್ರಜ್ಞರು, ಶಿಕ್ಷಣಶಾಸ್ತ್ರಜ್ಞರು, ಇವರೆಲ್ಲರೂ ತಮ್ಮ ವೈಯಕ್ತಿಕ ಹಕ್ಕುಗಳನ್ನು ಪಡೆದೇ ಇರುತ್ತಾರೆ. ಸಾಹಿತ್ಯದಲ್ಲಿ ಇದಕ್ಕೆ (ಡಾಡಾಯಿಸಂ) ದಬಾವಣೆ ಎನ್ನುತ್ತಾರೆ. ರಾಜಕೀಯದಲ್ಲಿ ಇದು ಸಾಮ್ರಾಜ್ಯಶಾಹಿಯಾಗಿ ಮಾರ್ಪಡುತ್ತದೆ. ಸಾಮಾಜಿಕ ಜೀವನದಲ್ಲಿ ಇದು ಕುಲಶ್ರೇಷ್ಠತೆಯಾಗಿ ರೂಪಗೊಳ್ಳುತ್ತದೆ. ಈ ಶಕ್ತಿಯನ್ನು ಯಾವ ಹೆಸರಿನಿಂದ ಕರೆದರೂ ಇದು ಚುರುಕಾದ ನಿರ್ಲಕ್ಷ್ಯದಿಂದ ಕಾರ್ಯ ನಡಿಸಿ, ಸಾಧಾರಣ ಮನುಷ್ಯನ ವಿಷಯದಲ್ಲಿ ದ್ವೇಷಪೂರಿತವಾದ ಅಪಮಾನವನ್ನು ಬೆಳಸುತ್ತದೆ.

ಆದುದರಿಂದ ಈ ಎರಡು ವಿಧವಾದ ಯೋಚನಾ ನಿರ್ಮಾಣಗಳ ಅಂತರ್ನಿಗೂಢ ನ್ಯೂನತೆಯೇ ಪ್ರತಿವ್ಯಕ್ತಿಯ ಕಾರ್ಯ ಮತ್ತು ಯೋಚನೆಗಳಿಗಿರುವ ಭೀಕರ ವಿಲಕ್ಷಣವೆಂದು ಹೇಳಬಹುದು. ಇದರಿಂದ ಪ್ರತಿದಿನದ ಜೀವನದಲ್ಲಿ ಒಂದು ವೇಳೆ ವಕ್ರವಾದ ನಡತೆಗೆ ಒಯ್ಯುವ ಸಂಭವವೂ ಉಂಟು. ಆದುದರಿಂದ ಅನೇಕ ವ್ಯಕ್ತಿಗಳಲ್ಲಿ ನೈಸರ್ಗಿಕವಾಗಿ ಸೌಜನ್ಯ ವಿದ್ದರೂ ಅದು ಕ್ರೌರ್ಯಕ್ಕೆ ಮಾರ್ಪಡುವ ಸಂಭವವಿರುತ್ತದೆ.

ಪ್ರಪಂಚವನ್ನು ಕುಲ ಮತ್ತು ಜಾತಿಗಳಿಗನುಸಾರವಾಗಿಯೂ ಜನಾಂಗ ಮತ್ತು ನಾಡುಗಳಿಗನುಸಾರವಾಗಿಯೂ ವಿಂಗಡಿಸುವುದು ಅಗತ್ಯವೆ?ಇವುಗಳಲ್ಲಿ ಮೊದಲನೆ ಎರಡು ವಿಷಯುಗಳು ಪ್ರಾಕೃತಿಕ ಲಕ್ಷಣಗಳ ಮೇಲೆಸ್ಥಾಪಿಸಲ್ಪಟ್ಟಿವೆ. ಪ್ರಾಯಶಃ ಇವುಗಳಿಗೆ ಮಾನವನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡತಕ್ಕ ಶಕ್ತಿಯ ಸೃಷ್ಟಿಗೆ ಆಧಾರವಿಲ್ಲವೆಂದುಹೇಳಬಹುದು. ವಸ್ತುತಃ ಇಬ್ಬರು ಮಾನವರು ಇಂದು ಪರಸ್ಪರ ಭಿನ್ನಾಭಿಪ್ರಾಯುಗಳನ್ನು ಪಡೆದೇ ಇರುವರೆಂದು ನಮಗೆ ಚೆನ್ನಾಗಿ ಗೊತ್ತು. ಮಾನಸಿಕವಾಗಿಯೂ, ದೈಹಿಕವಾಗಿಯೂ ಅವರು ಭಿನ್ನವಾಗಿಯೇ ಇರುತ್ತಾರೆ ಜನಾಂಗವಾಗಲಿ, ಒಂದು ಕೋಮು ಆಗಲೀ ಸಾಮಾನ್ಯವಾದ ಮಾನಸಿಕ

ಸಂತುಷ್ಟಿಗೆ ಒಂದು ಮುಖ್ಯಕಾರಣ. ಅದು ಯಾವಾಗಲೂ ಮಾನವನ ಮನಸ್ಸು ಮತ್ತು ಶಕ್ತಿ ಇವುಗಳ ನೆರವು ಪಡೆದ ಮಾನವನಿರ್ಮಿತ ರಚನೆಯ ಮೇಲೆ ನಿಂತಿದೆ ಎಂದು ಧಾರಾಳವಾಗಿ ಹೇಳಬಹುದು. ಈಗ ಒಂದೇ ಒಂದು ಪ್ರಧಾನವಾದ ಮನೋಭಾವನೆ ಉಂಟು. ಇದನ್ನು ನಾವು ಗಮನಿಸಬೇಕಾಗಿದೆ. ಅದು ಸರ್ವಸಮ್ಮತವಾದ ಅಭಿಪ್ರಾಯದಿಂದ ಕೂಡಿದುದು. ಈ ಅಭಿಪ್ರಾಯವು ಪ್ರತಿದೇಶದ ವಾತಾವರಣದಲ್ಲಿಯೂ ನೆಲೆಸಿದೆ. ಅದು ಕೇವಲ ಕೃತಕವಾಗಿರಬಹುದು ಅಥವಾ ಅತ್ಯಂತ ಆಳವಾದ ಸ್ವಾಭಾವಿಕ ಉಗಮಗಳಿಂದ ಹೊರಹೊಮ್ಮಬಹುದು. ಆದರೆ ಅದು ನಿಸ್ಸಂದೇಹವಾಗಿಯೂ, ಅಖಂಡವಾದ ಮತ್ತು ಪೀಡಾರಹಿತವಾದ ಪಿತ್ರಾರ್ಜಿತದ ಸಾಫಲ್ಯಗಳೆಂದು ಹೇಳಬಹುದು. ವಿಶ್ವವ್ಯಾಪಿಯಾದ ಸಮ್ಮತಿಯನ್ನು ಪಡೆಯುವುದೇ ಸರ್ವರ ಅಭೀಷ್ಟವಾಗಿದೆ. ನಾವು ಒಮ್ಮತದಿಂದ ಮುಂದುವರಿಯೋಣ ಎಂಬುದೇ ಆ ಘೋಷಣೆ ಅಥವಾ ಕೂಗು. ಮನುಷ್ಯರು ಸ್ಪಷ್ಟವಾದ ಮತ್ತು ಪ್ರತ್ಯೇಕವಾದ ಪಂಗಡಗಳಿಗೆ ಜೀವಶಾಸ್ತ್ರದ ಮತ್ತು ಭಾಷೆಯ ತಳಹದಿಯನ್ನು ತೋರಿಸಿಕೊಡಲು ದುಡಿದಿದ್ದಾರೆ. ಇವುಗಳು ರಾಜಕೀಯ ಆಡಂಬರಗಾರರು ಮತ್ತು ದುರಾಶಾಪರರಾದ ಅರ್ಥಶಾಸ್ತ್ರಜ್ಞರು ಮಾತ್ರ ಉಪಯೋಗಿಸುವ ಸಾಧನಗಳೆಂದು ಬಹುವಿಶದವಾಗಿ ಸಾಧಿಸಲ್ಪಟ್ಟಿವೆ. ಜನಾಂಗಗಳಲ್ಲಾಗಲೀ ನಾಡುಗಳಲ್ಲಾಗಲೀ ಈ ಜನಗಳ ಸಮುದಾಯಗಳನ್ನು ವಿಶದೀಕರಿಸಲು ಒಂದೇ ಒಂದು ಮೂಲಸಿದ್ಧಾಂತವುಂಟು. ಅವು ಈ ಸಂಸ್ಥೆಗಳ ಐತಿಹಾಸಿಕ ಅಥವಾ ರಾಜಕೀಯ ಉತ್ಕ್ರಾಂತಿಗಳಾಗಿವೆ. ಈ ಗುಂಪುಗಳ ವೈವಿಧ್ಯದ ಅಸ್ತಿತ್ವಕ್ಕೆ ಯಾವ ಕಾರಣವೂ ಇಲ್ಲವೆಂದು ವಿಶದವಾದಂತಾಯಿತು.

ಆಂತರಿಕ ಮತ್ತು ಧಾರ್ಮಿಕ ಹಾಗೂ ಬಾಹ್ಯದ ಮತ್ತು ಸಮಾಜದ ಕ್ರಾಂತಿಯನ್ನು ತ್ವರೆಪಡಿಸುವುದೇ ಪರಿಹಾರ ಮಾರ್ಗವಾಗಿರುತ್ತದೆ. ವೈಯಕ್ತಿಕ ಸೇವೆ, ಅತಿರಾಷ್ಟ್ರೀಯ ಸಂಸ್ಥಾನಗಳ ನಿರ್ಮಾಣ ಮತ್ತು ನಿಃಸ್ವಾರ್ಥ ಮಾನವೀಯತೆ ಇವುಗಳೇ ನಿಜವಾದ ಸಂಸ್ಕೃತಿಯ ಲಕ್ಷಣಗಳು.

---

## ೬. ನಾಗರಿಕ ಯುವಕ

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಶಕ್ತಿಗಳ ಸಂಕೀರ್ಣತೆಯಲ್ಲಿ ಹೆಚ್ಚಿನ ಪರಿಚಯವನ್ನು ಉಂಟುಮಾಡಿಕೊಳ್ಳುವುದೇ ಇಂದಿನ ಕರ್ತವ್ಯವಾಗಿದೆ. ನಾಗರಿಕಯುವಕರಲ್ಲಿ ಭರವಸೆ ಮತ್ತು ಚಟುವಟಿಕೆಗಳನ್ನು ಕಾಣುವುದಾದರೆ ಹಳ್ಳಿಯ ಯುವಕರಲ್ಲಿ ನಿರಾಶೆಯನ್ನು ಕಾಣಬಹುದು. ಹಾಗೆಯೇ ಗ್ರಾಮನಿವಾಸಿಗಳಿಗೆ ಮೊದಲು ಮತ; ಆ ಮೇಲೆ ಆಹಾರ. ಪಟ್ಟಣನಿವಾಸಿಗಳಿಗಾದರೋ ಮೊದಲು ಆಹಾರ; ಆ ಮೇಲೆ ಮತ.

ಪ್ರಪಂಚದ ಎಲ್ಲಾ ಪಟ್ಟಣಗಳಲ್ಲಿರುವಂತೆಯೇ ಭಾರತದ ಪಟ್ಟಣಗಳಲ್ಲಿಯೂ, ಸಾಮಾಜಿಕ ಭಾವನೆಗಳಲ್ಲಿಯೂ, ಐಹಿಕ ವಾತಾವರಣದಲ್ಲಿಯೂ, ಪರಸ್ಪರ ವಿರುದ್ಧವಾದ ಎರಡು-ತೆರನಾದ ಸಮಾಜದ ಪಂಗಡಗಳು ಇರುತ್ತವೆ. ಡಿಸ್ರೇಲಿ ( Disraely ) ಎಂಬಾತನು ಅವುಗಳನ್ನು ಎರಡು ಜನಾಂಗಗಳೆಂದು ಸೂಚಿಸಿದ್ದಾನೆ. ಆಧುನಿಕ ಮಾನವನ ಆರ್ಥಿಕ ಅವಶ್ಯಕತೆಯೇ ಇವುಗಳ ಸಾಮಾನ್ಯ ಸನ್ನಿವೇಶದ ಒಂದು ವೈಶಿಷ್ಟ್ಯವಾಗಿದೆ. ಒಬ್ಬೊಬ್ಬರು ಒಂದೊಂದು ವಿಧವಾಗಿ ಇರಬಹುದು. ಕೆಲವರು ಕೂಲಿಯವರು, ಕೆಲವರು ಗಿರಣಿ ಮಾಲಿಕರು, ಕೆಲವರು ಗುಮಾಸ್ತರು ಮತ್ತೆ ಕೆಲವರು ಚುಂಗಡಿ ವ್ಯಾಪಾರಿಗಳು ಹೀಗೆ ನಾನಾವಿಧವಾದ ಉದ್ಯೋಗಗಳಲ್ಲಿ .ಪ್ರವರ್ತರಾಗಿರುತ್ತಾರೆ. ಅವರು ತಮ್ಮ ಆರ್ಥಿಕ ಸ್ಥಿತಿಯನ್ನು ಚೆನ್ನಾಗಿ ಬಲ್ಲರು. ಮತ್ತು ಪ್ರಚಲಿತ ಸಮಾಜದ ಕಾರ್ಯನಿರತ ಸದಸ್ಯರಾಗಬೇಕಾದರೆ, ಇರಬೇಕಾದ ಅಥವಾ ಅಭಿವೃದ್ಧಿಗೊಳಿಸಿಕೊಳ್ಳಬೇಕಾದ ಸಾಮಾಜಿಕ ಅಥವಾ ರಾಜಕೀಯ ಜಾಗೃತಿಯನ್ನು ಅವರು ನಿರ್ಲಕ್ಷಿಸಲು ಯತ್ನಿಸುತ್ತಾರೆ. ಇಲ್ಲಿಯೇ ಯುವಕನು ಕೌಶಲ್ಯ ಮತ್ತು ಆದರ್ಶಗಳಿಗೆ ಬೇಕಾದ ಉತ್ಸಾಹವನ್ನು ಕಳೆದುಕೊಂಡು ಆರ್ಥಿಕಯಂತ್ರಕ್ಕೆ ದಾಸನಾಗುವನು. ಈ ಸನ್ನಿವೇಶಗಳೇ ಅವನ ಮನಸ್ಸನ್ನು ಹಿಂಸಿಸಿ ತನ್ನ ಕ್ಷೇಮಲಾಭಗಳು ಕೇವಲ ಹಣ ಮತ್ತು ಐಹಿಕ ಸಂಪತ್ತುಗಳ ಆರ್ಜನೆಯ ಅಧೀನವೆಂಬ ಅರಿವು ಉಂಟಾಗುತ್ತದೆ. ಅಲ್ಲದೆ ಅದು ತನ್ನದಕ್ಕಿಂತಲೂ ವಿಶಾಲವಾದ ಪಂಗಡಗಳ ವಿಷಯದಲ್ಲಿ ತಾಟಸ್ಥ್ಯ ಮನೋವೃತ್ತಿಯನ್ನುಂಟು ಮಾಡುತ್ತದೆ. ಇಷ್ಟೇ ಅಲ್ಲದೆ ಒಂದೊಂದು

ವೇಳೆ ದ್ವೇಷ ಭಾವನೆಯನ್ನು ಕೂಡಾ ಉಂಟು ಮಾಡಬಹುದು. ವಿದ್ಯಾಭ್ಯಾಸ ಅಥವಾ ಇತರ ಶಿಕ್ಷಣ ಅಥವಾ ಸಮಾಜಸೇವೆ ಇವುಗಳು ವೈಯಕ್ತಿಕ ಸ್ಥಾನ, ಅಧಿಕಾರ ಮತ್ತು ಧನ ಇವುಗಳನ್ನು ಪಡೆಯಲು ಸಹಕಾರಿಗಳಾಗಬಹುದು. ವಿದ್ಯಾಭ್ಯಾಸದ ಅರ್ಹತೆಯು ಈ ವಿಧವಾದ ಉದ್ದೇಶಕ್ಕಾಗಿಯೇ ಅಗತ್ಯವೆಂದು ಭಾವಿಸಲ್ಪಟ್ಟಿದೆ. ಸಾಮಾನ್ಯ ಪ್ರಜೆಗಳ ಅಥವಾ ಜನರ ದೃಷ್ಟಿಯಿಂದ ಪ್ರಖ್ಯಾತಿಯನ್ನು ಪಡೆಯುವ ಉದ್ದೇಶದಿಂದ ಮಾತ್ರವೇ ಸಮಾಜಸೇವೆಗಳಲ್ಲಿ ನಿರತರಾದ ಅನೇಕರನ್ನು ನಾವು ನೋಡಬಹುದು. ಹೀಗಾಗಿ ನಗರದ ವಾತಾವರಣವೆಲ್ಲಾ ಸ್ವಾರ್ಥತೆಯಿಂದ ತುಂಬಿಹೋಗಿದೆ.

ಹೀಗೆ ಭಾರತದ ನಾಗರಿಕ ವಾತಾರಣವು ಅತ್ಯಲ್ಪ ಭರವಸೆಯನ್ನು ಕೊಡುವುದೆಂಬುದನ್ನು ನಾವು ಸುಲಭವಾಗಿ ಕಾಣಬಹುದು. ಆದರೂ ತಮ್ಮ ನೆರೆಹೊರೆಯವರಿಗೂ, ತಮ್ಮ ರಾಷ್ಟ್ರಕ್ಕೂ ಅಥವಾ ವಿಶಾಲ ಪ್ರಪಂಚಕ್ಕೂ ಮಾರ್ಗದರ್ಶಕವಾಗಬಹುದಾದ ಕಾರ್ಯತತ್ಪರರಾದ ಅಲ್ಪಸಂಖ್ಯಾಕರ ಒಂದು ಸಂಸ್ಥೆಯನ್ನು ಸ್ಥಾಪಿಸಲು ಸಾಧ್ಯವುಂಟು.

ಪ್ರತಿಯೊಂದು ಸಂಧಿಗ್ಧ ಸಮಯದಲ್ಲಿಯೂ ಅಂಧಕಾರ ಮತ್ತು ಅಪನಂಬಿಕೆಗಳು ಜನರಲ್ಲಿ ಹರಡುತ್ತವೆ. ಭವಿಷ್ಯತ್ತಿನಲ್ಲಿಯೂ ಕೂಡ ಒಂದು ಬಲವಾದ ನಿರಾಶೆಯುಂಟೆನ್ನಬಹುದು. ಇಂತಹ ಸಂದರ್ಭಗಳಲ್ಲಿಯೇ ಒಂದು ಕ್ರಾಂತಿ ಅಥವಾ ಪ್ರತಿಕ್ರಾಂತಿ ಉದ್ಭವಿಸುತ್ತದೆ. ಆದರೆ ಸರ್ವಸಾಮಾನ್ಯವಾದ ಅತೃಪ್ತಿಯು ಜನರನ್ನು ಕ್ರಾಂತಿಗೆ ಒಯ್ಯುವುದಿಲ್ಲ. ಯಾವಾಗಲೂ ಕಾರ್ಯತತ್ಪರರೂ ದೃಢಮನಸ್ಸುಳ್ಳವರೂ ಸಾಹಸಿಗಳೂ ಆದ ಜನರು ಅಲ್ಪಸಂಖ್ಯಾಕರಾದರೂ ಕೂಡ ಬಲವನ್ನು ವರ್ಧಿಗೊಳಿಸಲು ಮತ್ತು ಸ್ಫೂರ್ತಿಯನ್ನು ಪುನರುಜ್ಜೀವನಗೊಳಿಸಲು ಶಕ್ತರಾಗುತ್ತಾರೆ.

ಮುಸ್ಲಿಂಲೀಗ್ ಸಂಸ್ಥೆ ಮತ್ತು ಹಿಂದೂ ಮಹಾಸಭೆಯೂ ಕೂಡ ಭಾರತೀಯ ಯುವಕರಲ್ಲಿ ಒಂದು ಭಾಗವನ್ನು ಮಾತ್ರ ಪ್ರೇರೇಪಿಸಲು ಸಾಮರ್ಥ್ಯವುಳ್ಳವಾಗಿವೆ. ಈ ಸಂಸ್ಥೆಗಳ ಮತೀಯ ಮತ್ತು ಸಂಕುಚಿತ ದೃಷ್ಟಿಯೇ ಉದಾರವೂ ಮತ್ತು ಸ್ವತಂತ್ರವೂ ಆದ ಜೀವನಕ್ಕೂ ಮತ್ತು ಜನರ ನೈತಿಕ ಅಭಿವೃದ್ಧಿಗೂ ಬಹುಶಃ ಒಂದು ದೊಡ್ಡ ಅಡಚಣೆಯಾಗಿದೆ ಎಂದು ಮಾತ್ರ ಹೇಳಬಹುದು. ಈ ಸಂಸ್ಥೆಗಳ ಅಭಿಪ್ರಾಯವೇ ಪ್ರಧಾನ

ಹಾಗುವ ಪಕ್ಷದಲ್ಲಿ ನಮ್ಮ ಭವಿಷ್ಯವು ಅರಕ್ಷಿತವೂ ಅಂಧಕಾರಮಯವೂ ಆಗುತ್ತದೆ.

ಈ ಸಂಸ್ಥೆಗಳನ್ನೇ ನಂಬಿರತಕ್ಕ ತರುಣರು ಕಪಟಿಗಳು ಮತ್ತು ಸಂಕುಚಿತ ದೃಷ್ಟಿಯುಳ್ಳವರೂ ಆಗಿರುತ್ತಾರೆ. ಸಂಪದಭಿವೃದ್ಧಿಗಳಿಂದ ಕೂಡಿ ಬಾಳುವುದೇ ಅವರ ಜೀವನದ ಮುಖ್ಯಧ್ಯೇಯ.

ಆದರೆ ಕಾರ್ಯತತ್ಪರರಾದವರಲ್ಲಿಯೂ ಕೂಡ ಪರಸ್ಪರ ಭಿನ್ನಾಭಿಪ್ರಾಯಗಳನ್ನು ನೋಡಿ ನಾವು ವಿಷಾದಪಡಬೇಕಾಗಿದೆ. ಅವರನ್ನು ನಾವು ಸ್ಪಷ್ಟವಾಗಿ ಎರಡು ಮುಖ್ಯವಿಭಾಗಗಳನ್ನಾಗಿ ವಿಂಗಡಿಸಬಹುದು. ಅವು ಯಾವುವೆಂದರೆ ಸಮತಾವಾದಿಗಳು, ಮತ್ತು ವಿಶಾಲದೃಷ್ಟಿಯುಳ್ಳವರು.

ನಮ್ಮ ಸಾಮಾಜದಲ್ಲಿ ಕೆಲವರಿಗೆ ಸಮಾಜಿಕ ಕ್ರಾಂತಿಯನ್ನುಂಟು ಮಾಡಬೇಕೆಂಬ ಕುತೂಹಲವುಂಟು. ಅವರೇ ಈ ಸಮತಾವಾದಿಗಳು, ಮತ್ತು ರಾಯ್ ಅನುಯಾಯಿಗಳು. ಇನ್ನುಳಿದ ವಿಶಾಲ ದೃಷ್ಟಿಯವರು ಪರಮತ ಸಹಿಷ್ಣುಗಳಾಗಿಯೂ ಮತ್ತು ಹೊಂದಿಕೊಳ್ಳುವ ಸ್ವಭಾವವುಳ್ಳವರಾಗಿಯೂ ಇದ್ದು ಮಹಾತ್ಮಾ ಗಾಂಧಿ ಮತ್ತು ಪಂಡಿತ ನೆಹ್ರು ಇವರುಗಳಿಂದ ಆರಂಭಿಸಲ್ಪಟ್ಟ ಸಂಸ್ಥೆಯ ಅನುಯಾಯಿಗಳಾಗಿ ಇದ್ದಾರೆ. ಇವರ ಮತಕ್ಕೆ ಮಾನಸಿಕ ಆಧಾರವನ್ನು ವಿಶದವಾಗಿ ಆಲೋಚಿಸೋಣ.

ಪ್ರಾರಂಭದಲ್ಲಿಯೇ ಈ ಸಂಸ್ಥೆಗಳೆಲ್ಲವೂ ಸಾಮಾನ್ಯವಾಗಿ ಅಜ್ಞಾನದ ಲಕ್ಷಣಗಳನ್ನು ಪಡೆದಿದ್ದುವೆಂದು ಹೇಳಬಹುದು. ಇದು ನಿರೀಕ್ಷಿತವೂ ಅಥವಾ ಗೋಚರವೂ ಆಗಿರಲಾರದು. ಆದರೆ ಅದು ನಿಜವಾಗಿಯೂ ಬಹಳ ಪ್ರಾಮುಖ್ಯತೆಯನ್ನು ಪಡೆದ ಮತ್ತು ಅವಶ್ಯಕವಾಗಿರುವ ಒಂದು ಅಂಶವಾಗಿದೆ. ಇದೇ ಕಾರಣದಿಂದಲೇ ಸಮತಾವಾದಿಗಳು ಮತ್ತು ಸಮಾಜಸುಧಾರಕರು ವಿಶಾಲದೃಷ್ಟಿಯುಳ್ಳವರೊಡನೆ ಸಹಕರಿಸುತ್ತಿರುವುದು. ನಮ್ಮ ಯುವಕರ ಚಳುವಳಿಯು ಹಿಂದೆ ಬಿದ್ದಿರುವುದಕ್ಕೆ ಇದೇ ಮುಖ್ಯಕಾರಣ; ಅಲ್ಲದೆ ಅದು ನಮ್ಮಲ್ಲಿ ಪ್ರಾಪಂಚಿಕ ಪ್ರಗತಿಯಲ್ಲಿ ಅತ್ಯುತ್ತಮವಾದ ಭಾವನೆಗೆ ಒಂದು ವಿಧವಾದ ತಾಟಸ್ಥ್ಯವನ್ನು ಉಂಟುಮಾಡುತ್ತದೆ. ಶಿಸ್ತು, ಚಾಕುಚಕ್ಯತೆ, ತರಪೇತು ಇವುಗಳಿಲ್ಲದ ಮತ್ತು ಬುದ್ಧಿವಿಹೀನರಾದ ನಾಯಕರನ್ನು ನಾವು ಪಡೆದಿದ್ದೇವೆ. ಅವರು ಅಲ್ಪವಾದ ಅಥವಾ ಮಹತ್ತಾದ ಕ್ರಾಂತಿಯ

ನ್ನೆಬ್ಬಿಸಲು ಸರ್ವಥಾ ಅಸಮರ್ಥರಾಗಿರುತ್ತಾರೆ. ಜ್ಞಾನದ ಪ್ರಾಮುಖ್ಯತೆಯನ್ನು ನಾವು ನಿರ್ಲಕ್ಷಿಸಿದ್ದೇವೆ. ನಾವು ವಿಜ್ಞಾನ ಸಂಶೋಧನೆಯ ಪರಿಣಾಮವನ್ನು ಪ್ರತಿಯೊಂದು ಸಂದರ್ಭದಲ್ಲಿಯೂ ಗಮನಿಸಿಲ್ಲ. ಈ ನಮ್ಮ ಮನೋಭಾವನೆಯೇ ನಮ್ಮ ನಾಶಕ್ಕೂ ನಮ್ಮ ಯುವಕನಾಯಕರ ಹೀನ ದೆಶೆಗೂ ಕಾರಣವಾಗಿದೆ. ಜೀವನದ ನಾನಾಸಮಸ್ಯೆಗಳನ್ನು ಪಂಡಿತ ನೆಹ್ರೂರವರು ಅರಿತಿರುವುದರಿಂದ ಅವರು ಜಗತ್ತಿನ ಅನೇಕ ವಿಚಾರಪರರಿಂದಲೂ, ದೇಶಸೇವಕರಿಂದಲೂ ಮತ್ತು ಜನಸಾಮಾನ್ಯರಿಂದಲೂ ಒಂದೇ ರೀತಿಯಾಗಿ ಗೌರವಿಸಲ್ಪಡುತ್ತಿದ್ದಾರೆ. ನಮ್ಮ ಯುವಕ ಮುಂದಾಳುಗಳಲ್ಲಿ ಕೇವಲ ಕೆಲವರು ಮಾತ್ರ ಆರ್ಥಿಕ, ಸಾಮಾಜಿಕ ಅಥವಾ ವೈಜ್ಞಾನಿಕ ಅಥವಾ ಸಾಹಿತ್ಯ ಜ್ಞಾನದ ನಾನಾ ಭಾಗಗಳನ್ನು ಚೆನ್ನಾಗಿ ಅರಿತಿದ್ದಾರೆ. ವಿದ್ಯಾವಂತರಾದ ನಾಗರಿಕರಲ್ಲಿ ಒಂದು ವಿಧವಾದ ಪದವೀಧರರ ಅಂತಸ್ತು ಕಾಣುತ್ತದೆ. ಇದು ಕೇವಲ ಕಲಾಶಾಲೆಯ ಜೀವನದಲ್ಲಿ ಮಾತ್ರ ತೋರ್ಪಡದೆ ನಮ್ಮ ಯುವಕ ಯುವತಿಯರ ವಿಶಿಷ್ಟ ಜೀವನದಲ್ಲಿಯೂ ಹರಡಿರುತ್ತದೆ. ಇದು ಬಹಳ ವಿಚಿತ್ರವಾದ ಒಂದು ಮನೋಭಾವನೆ. ಇದರಿಂದ ಒಂದು ವಿಧವಾದ ವೈಯಕ್ತಿಕ ಆಡಂಬರವೂ ಮತ್ತು ನಿಷ್ಫಲವಾದ ಅಥವಾ ಗೊತ್ತುಗುರಿಯಿಲ್ಲದ ನಡತೆಯನ್ನು ಬೆಳಸತಕ್ಕ ಇತರ ಗುಣಗಳೂ ಅಂಕುರಿಸುತ್ತವೆ. ಇವನ್ನೇ ನಾವು ಅನೇಕ ವೇಳೆ ಒಣ ಹೆಮ್ಮೆ ಎನ್ನುತ್ತೇವೆ. ಆದರೆ ಈ ಅಭಿಪ್ರಾಯವು ಅದಕ್ಕಿಂತಲೂ ಕೇಡು. ಏಕೆಂದರೆ ಈ ಒಣ ಹೆಮ್ಮೆಯಲ್ಲಿ ಒಂದು ತರಹೆ ಮೇಲ್ಮಟ್ಟದ ಆತ್ಮಾವಲಂಬನೆಯನ್ನು ಮತ್ತು ಸೂಕ್ಷ್ಮತರವಾದ ದುಷ್ಟ ಶಕ್ತಿಯನ್ನೂ ಕಾಣಬಹುದು. ಈಗ ನಾವು ವಿದ್ಯಾರ್ಥಿ ಸಂಸ್ಥೆಗಳ ಕಾರ್ಯಗಳನ್ನು ಗಮನಿಸೋಣ. ಧ್ವಜಾರೋಹಣೆ ಮತ್ತು ಘೋಷಣೆಗಳಲ್ಲಿಯೇ ನಮ್ಮ ಯುವಕರ ಶಕ್ತಿಸಾಮರ್ಥ್ಯಗಳು ವ್ಯರ್ಥವಾಗುತ್ತಿವೆ. ಸ್ವಾತಂತ್ರ್ಯ, ಶಾಂತಿ ಮತ್ತು ಅಭಿವೃದ್ಧಿ ಎಂಬ ಪದಗಳನ್ನು ಅರ್ಥವಿಲ್ಲದ ಅಥವಾ ತಿಳಿವಳಿಕೆಯಿಲ್ಲದ ರೀತಿಯಲ್ಲಿ ಗಟ್ಟಿಯಾಗಿ ಅರಚಿಕೊಳ್ಳುತ್ತಾರೆ. ಮುಷ್ಕರಗಳನ್ನೂ ಹರತಾಳಗಳನ್ನೂ ಈ ಸಂಘಗಳು ಏರ್ಪಡಿಸಿ ಅದರ ಮೂಲಕ ದೇಶದಲ್ಲಿರತಕ್ಕ ಇತರ ಹಿರಿದಾದ ಸಂಸ್ಥೆಗಳ ವಿಧಾನಗಳನ್ನೂ ಅನುಕರಿಸುತ್ತವೆ. ನಿತ್ಯಕಾರ್ಯಗಳನ್ನು ಮಾಡದೆ ಇರತಕ್ಕ ಸಮಯದಲ್ಲಿ ಪ್ರತಿಯೊಬ್ಬರೂ ಪ್ರಯೋಜನ

ಕಾರಿಯಾದ ಕೆಲಸವನ್ನು ಮಾಡುವುದು ಸೂಕ್ತವಾಗಿದೆ. ಆದರೆ ನಮಗೆ ಕೇಳಿ ಬರುವುದೆಲ್ಲಾ ಕೇವಲ ಬಡಾಯಿ ಮಾತುಗಳು. ಅಸಂಪೂರ್ಣ ಜ್ಞಾನವುಳ್ಳ ನಾಗರಿಕ ಯುವಕನನ್ನು — ಜಿಗುಪ್ಸೆಯನ್ನುಂಟುಮಾಡುವುದರಲ್ಲಿ ವಸ್ತುಪಾತಗಳಂತಿರುವ ಉಪನ್ಯಾಸಗಳಿಂದ ಕೂಡಿದ ಸಭೆಗಳೂ ಅಥವಾ ಸಾವಿರಾರು ಸಲ ಪ್ರನರುಚ್ಚರಿಸಲ್ಪಟ್ಟ ಘೋಷಣೆಗಳಿಂದ ಕೂಡಿದ ಮೆರವಣಿಗೆಗಳೂ ಆಕರ್ಷಿಸಲಾರವು. ಹೀಗೆಯೇ ನೂಲುವುದಾಗಲೀ ಅಥವಾ ಅದರಂತಿರುವ ಯಾವ ಕೆಲಸವಾಗಲೀ ಉತ್ತಮವಾಗಿರುವಂತೆ ತೋರುವುದಿಲ್ಲ. ಈ ರಾಜಕೀಯ ಕಾರ್ಯಕಲಾಪಗಳ ಬೇರುಗಳು ಶಿಥಿಲವಾಗುತ್ತಿರುವುದೇ ಈಗಣ ಮುಖ್ಯ ಸಮಸ್ಯೆಯಾಗಿದೆ. ನಮ್ಮ ಜೀವನದ ಸರ್ವತೋಮುಖವಾದ ಬೆಳವಣಿಗೆಗೆ ನಿಜವಾಗಿಯೂ ಫಲಕಾರಿಯಾದ ಒಂದು ಕಾರ್ಯಕ್ರಮವನ್ನು ಕೈಗೊಳ್ಳಲು ನಾವು ಇದುವರೆವಿಗೂ ವ್ಯವಸ್ಥೆಮಾಡಲು ಸಮರ್ಥರಾಗಿಲ್ಲ. ಭಾರತದ ನಾಗರಿಕ ಜೀವನದಲ್ಲಿ ಅಹಂಕಾರ ಮತ್ತು ಮೋಸ ಎಂಬ ಪದಗಳು ಎಲ್ಲೆಲ್ಲಿಯೂ ಕೇಳಿ ಬರುತ್ತಿವೆ. ಅಲ್ಲದೆ ಯುವಕರೂ ಕೂಡ ತಮ್ಮ ಪಾತ್ರವನ್ನು ಅದರಲ್ಲಿ ಪಡೆದೇ ಇದ್ದಾರೆ.

ಆಧುನಿಕ ನಾಗರಿಕ ವಿದ್ಯಾವಂತನು ಬಹಳ ಸಂದಿಗ್ಧ ಸ್ಥಿತಿಯಲ್ಲಿರುತ್ತಾನೆ. ಅವನು ತನ್ನ ಊಹಾಶಕ್ತಿಯ ಅಭಾವವನ್ನೂ ವೃತ್ತಿಸಂಬಂಧವಾದ ಜ್ಞಾನದ ದಾರಿದ್ರ್ಯವನ್ನೂ ವ್ಯಕ್ತಪಡಿಸುತ್ತಿದ್ದಾನೆ. ಮಾನವನ ಯಂತ್ರ ಪರಾಧೀನತೆಯ ದ್ವೇಷವು ನಮ್ಮಲ್ಲಿ ಆ ಯಂತ್ರಕ್ಕೇ ಒಂದು ವಿಧವಾದ ಅನಾದರಣೆಯನ್ನುಂಟುಮಾಡಿದೆ. ಆದರೆ ಯಂತ್ರವು ಚಿರಸ್ಥಾಯಿಯಾಗಿರುವುದರಿಂದ ಮಾನವನು ಅದರ ಸೃಷ್ಟಿಶಕ್ತಿಯನ್ನು ಅಭಿವೃದ್ಧಿಗೊಳಿಸಲು ಯತ್ನಿಸಬೇಕು.

ಪಕ್ಷಾನುಯಾಯಿಗಳ ಚರ್ಚೆಯನ್ನು ಪುನಃ ಪ್ರಾರಂಭಿಸಿದರೆ—ಸಮತಾವಾದಿಗಳೂ, ರಾಯ್ ಅನುಯಾಯಿಗಳೂ ಆದ ಯುವಕರೂ ಸಾಮಾಜಿಕ ಸಮಸ್ಯೆಗಳ ವಿಷಯವಾಗಿ ಪ್ರಖ್ಯಾತರಾದ ನಾಯಕರೂ ಹೇಳಿದ ಮಾತುಗಳನ್ನೇ ಪುನಃ ಉಚ್ಚರಿಸುತ್ತಾರೆ. ರಷ್ಯಾದೇಶವು ಪ್ರಪಂಚವನ್ನೇ ಆಶ್ಚರ್ಯಗೊಳಿಸಿದಂತಹ ಕ್ರಾಂತಿಯುತವಾದ ಸನ್ನಿವೇಶಗಳಲ್ಲಿ ಇವರು ಹೆಚ್ಚಾದ ಆಸಕ್ತಿಯನ್ನು ಪಡೆದಿದ್ದಾರೆ. ಈ ಉತ್ಸಾಹವೂ ಕಾರ್ಲ್ ಮಾರ್ಕ್ಸ್‌ರ

ಮಹಾಶಯನಿಂದ ಒತ್ತಿಹೇಳಲ್ಪಟ್ಟು ಪ್ರತಿಕ್ಷಣದಲ್ಲಿಯೂ ಬದಲಾವಣೆಗೆ ಗುರಿಯಾದ ಈ ಜೀವನದ ಸನ್ನಿವೇಶಗಳಿಂದ ಕುಗ್ಗಿಸಲ್ಪಟ್ಟಿದೆ. ಮೇಲೆ ಹೇಳಲ್ಪಟ್ಟ ಆರ್ಥಿಕ ದುರಾಶೆಗೆ ಇರುವ ಪ್ರೇರಣೆಯೂ ಕೂಡ ಈ ತೀವ್ರಾಸಕ್ತಿಯನ್ನು ಮೃದುವಾಗಿ ಮಾಡಿದೆ. ಸ್ಥಳೀಯ ಸ್ಥಿತಿಗತಿಗಳ ಅಜ್ಞಾನ ಮತ್ತು ಅಲಕ್ಷ್ಯಗಳೂ ಉತ್ಸಾಹವನ್ನು ಮತ್ತಷ್ಟು ಕುಗ್ಗಿಸಿವೆ. ರಾಜಕೀಯ ಚಳುವಳಿಗೆ ಅಹಿಂಸೆಯೇ ಒಂದು ಮುಖ್ಯ ಸಾಧನ ಅಥವಾ ಕ್ಷಾಮಪೀಡಿತ ಭಾರತೀಯನಿಗೆ ಗ್ರಾಮಕೈಗಾರಿಕೆಯ ಚಳುವಳಿಗಳೇ ಒಂದು ಸಹಾಯ—ಎಂಬ ಈ ಎರಡು ಮಾರ್ಗಗಳಿಗೂ ತಮ್ಮ ದ್ವೇಷವನ್ನು ಅವರು ಉದ್ಘೋಷಿಸುತ್ತಿದ್ದಾರೆ. ಅವರ ಸಾಂಘಿಕ ಚರ್ಚೆಗಳೆಲ್ಲಾ ಕಾಫಿ ಟೀ ಕ್ಲಬ್ಬುಗಳಲ್ಲಿಯೇ ನಡೆಯುತ್ತವೆ. ಆದರೆ ಸಮತಾವಾದಿಗಳೂ ಮತ್ತು ಪ್ರಜಾಸತ್ತಾತ್ಮಕವಾದಿಗಳೂ ತಮ್ಮ ತಮ್ಮ ಪಕ್ಷೀಯ ಕೆಲಸಗಾರರೊಡನೆಯೂ ಮತ್ತು ಹಿತಚಿಂತಕರೊಡನೆಯೂ ಪಡೆಯತಕ್ಕ ನೈಜವಾದ ಸಂಪರ್ಕವು ಭಾರತದ ಯುವಕ ಚಳುವಳಿಯ ಯಾವ ವ್ಯವಸ್ಥಾಪಕನ ಗಮನಕ್ಕಾದರೂ ಬಂದೇಬರುತ್ತದೆಂದು ನಾವು ಸಮಾಧಾನದಿಂದ ಹೇಳಬೇಕಾಗಿದೆ. ಇದೇ ರಾಷ್ಟ್ರದ ಪ್ರಗತಿಯ ಒಂದು ಸೂಚನೆಯಾಗಿದೆ. ಯುವಕ ಸ್ವಯಂಸೇವಕರಿಗೆ ಅರ್ಹವಾದ ತರಪೇತನ್ನು ಕೊಡಲು ಅವರು ಹೆಚ್ಚು ಮುತುವರ್ಜಿಯನ್ನು ವಹಿಸಿರುತ್ತಾರೆ. ಆದರೂ ರಾಜಕೀಯ ಕೆಲಸಗಾರನು ಅವಶ್ಯಕವಾಗಿ ಪಡೆಯಬೇಕಾದ ವಿದ್ಯಾಭ್ಯಾಸವನ್ನು ಅನೇಕರು ಇನ್ನೂ ಹೊಂದಿಲ್ಲ.

ರಾಷ್ಟ್ರದ ಕ್ರಾಂತಿಯ ಇತಿಹಾಸವನ್ನು ಬರೆಯುವಾಗ, ಚರಿತ್ರಕಾರನು ಸಾಮಾಜಿಕ ಪ್ರಜಾಪ್ರಭುತ್ವವಾದಿಗಳ ಎರಡು ದುಃಖಕರವಾದ ಅಪಜಯಗಳನ್ನೂ ತೋರಿಸಲೇಬೇಕಾಗುತ್ತದೆ. ಕಳೆದ ಮಹಾಯುದ್ಧವಾದೊಡನೆಯೇ ಅವರು ಅಧಿಕಾರದಲ್ಲಿದ್ದಾಗ ಜರ್ಮನಿಯಲ್ಲಿ ಪಡೆದ ಪರಾವವೇಭ ಮೊದಲನೆಯದು. ಆಗ ಅವರು ಕಂಗಾಲಾಗಿದ್ದ ಜರ್ಮನರಿಗೆ ಸಹಾಯ ಮಾಡದಿದ್ದುದು ಮಾತ್ರವಲ್ಲದೆ ಆ ಜನಸಾಮಾನ್ಯದ ಬಹಳ ಮಟ್ಟಿನ ನಿರ್ದಯಾತ್ಮಕ ಮತ್ತು ಅವಮಾನಕರವಾದ ಜೀವನಕ್ಕೆ ಜವಾಬ್ದಾರರಾದರು. ಆಮೂಲಾಗ್ರ ಸುಧಾರಣಾ ಪ್ರಜಾಪ್ರಭುತ್ವ (Radical Democratic Party) ಪಕ್ಷದವರ, ಸುರಕ್ಷಿತವಲ್ಲದ ಮತ್ತು ನಂಬಿಕೆಗೆ

ಅರ್ಹವಲ್ಲದ ಕಾರ್ಯದಲ್ಲಿ ಎರಡನೆಯ ಪರಾಭವವನ್ನು ಕಾಣಬಹುದು. ಭಾರತೀಯ ಸಾಮಾನ್ಯ ಜನರ ಉದ್ಧಾರಕ್ಕಾಗಿ ಉಪಯೋಗಿಸಲ್ಪಡುತ್ತಿರುವ ರಾಷ್ಟ್ರೀಯ ಚಳುವಳಿಗಳ ಮಹತ್ತರವಾದ ಶಕ್ತಿಯನ್ನು ಬಲಹೀನಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಅವರ ಪಕ್ಷೀಯ ಚಿಹ್ನೆಯ ಚೀಟಿಯು ಅವರಲ್ಲಿರುವ ಹೇಡಿತನವನ್ನು ಮುಚ್ಚುವ ಹೊದಿಕೆಯಾಗಿದೆ. ಅವರ ಕಾರ್ಯಕಲಾಪಗಳು ನಮ್ಮ ದೇಶಕ್ಕೆ ತಕ್ಕವಲ್ಲ; ಅದು ನಿಜವಾಗಿಯೂ ಅವಮಾನಕರ.

ಸಮತಾವಾದಿಗಳು ಮತ್ತು ರಾಯ್ ಅನುಯಾಯಿಗಳು ನಾಡಿನ ಜನರನ್ನು ತಮ್ಮ ಪಕ್ಷಕ್ಕೆ ಸೆಳೆದುಕೊಳ್ಳಲು ಅಸಮರ್ಥರಾಗಿರುತ್ತಾರೆ. ಪಂಡಿತ ನೆಹ್ರೂರವರಂತಹ ನಾಯಕರೂ ಸಹ ಮಹಾತ್ಮಾ ಗಾಂಧಿಯವರ ತತ್ವಕ್ಕೆ ತಲೆಬಾಗುತ್ತಾರೆ. ಆದುದರಿಂದ ಮಹಾತ್ಮಾ ಗಾಂಧಿಯವರ ಜೀವನ ತತ್ವದ ಸಾರವನ್ನು ಮತ್ತು ರಾಷ್ಟ್ರೀಯ ಜೀವನದಲ್ಲಿ ಅದರ ಪ್ರಯೋಜನವನ್ನು ಅರಿಯಲು ಪ್ರಯತ್ನಿಸಬೇಕು. ನಮ್ಮ ದೇಶದ ಸ್ಥಿತಿಗತಿಗಳನ್ನು ಸರಿಯಾಗಿ ತಿಳಿದಿರುವವನೆಂದರೆ ಆತನೊಬ್ಬನೇ.

ವ್ಯಾವಸಾಯಿಕ ಕ್ರಾಂತಿಯಿಲ್ಲದೆ ಭಾರತೀಯ ಕ್ರಾಂತಿಯು ಅಸಂಭವವೆಂದು ಅವರು ಅರಿತಿದ್ದಾರೆ. ಭಾರತೀಯ ರೈತನು ಬಹಳ ದುಃಖಕರವಾದ ಕಷ್ಟನಷ್ಟಗಳನ್ನು ಅನುಭವಿಸುತ್ತಿದ್ದಾನೆ. ಇನ್ನೆಲ್ಲಿಯಾದರೂ ಇದೇ ದುಃಖಗಳನ್ನು ಅವನು ಅನುಭವಿಸಿದ್ದೇ ಆದರೆ ಅದು ದುರಂತವಾದ ಬಾಳೆಂದು ಪರಿಗಣಿಸಲ್ಪಡುತ್ತಿತ್ತು. ಆದರೆ ಇಲ್ಲಿ ನಮಗೆ ಅದು ಪ್ರತಿನಿತ್ಯದ ದೃಶ್ಯವಾಗಿದೆ. ಈ ವಿಧವಾದ ಕುಂದುಕೊರತೆಗಳನ್ನು ನಾವು ಈ ಪುಸ್ತಕದ ಬೇರೆ ಸ್ಥಳದಲ್ಲಿ ವಿವರಿಸಿದ್ದೇವೆ. ಗ್ರಾಮ ಭಾರತದ ಲಕ್ಷಗಟ್ಟಲೆ ಜನರನ್ನು ಸಾಮಾಜಿಕ ಜವಾಬ್ದಾರಿಗಳಿಗೆ ಗಮನ ಕೊಡುವಂತೆ ಜಾಗೃತಿಗೊಳಿಸುವುದೇ ಮಹಾತ್ಮಾಜಿಯವರ ಮುಖ್ಯ ಕರ್ತವ್ಯವಾಗಿದೆ. ಈ ಪ್ರಯತ್ನದಲ್ಲಿ ಅವರು ಬಹಳ ಮಟ್ಟಿಗೆ ಜಯಶೀಲರಾಗಿದ್ದಾರೆಂದು ಹೇಳಬಹುದು. ಮಾನವನ ಗೌರವ ಮತ್ತು ಹಕ್ಕುಗಳ ತಿಳಿವಳಿಕೆಯುಂಟಾಗುವಂತೆ ಈ ರೈತನನು ಮಹಾತ್ಮಾಜಿಯವರು ಪ್ರಬುದ್ಧಗೊಳಿಸಿದ್ದಾರೆ. ತಮ್ಮಲ್ಲಡಗಿರುವ ದಾಸ್ಯ ಭಾವವನ್ನು ಧೈರ್ಯದಿಂದ ಎದುರಿಸಲು, ತಮ್ಮ ಸಹಾಯವನ್ನು ನೀಡುತ್ತ ಹುರಿದುಂಬಿಸಿದ್ದಾರೆ. ಅಲ್ಲದೆ ಆ ರೈತರಲ್ಲಡಗಿರುವ ಜಡತ್ವವನ್ನು ನಿರ್ಮೂಲ

ಮಾಡಿದ್ದಾರೆ. ಈ ವಿಧವಾದ ಗುಣಗಳಿಂದ ಕೂಡಿದ್ದರೂ ಕೂಡ ಗಾಂಧಿ ಮತ್ತು ನೆಹ್ರೂರವರ ಅನುಯಾಯಿಗಳಾದ ಯುವಕರು ಪ್ರಾಶಸ್ತ್ಯ ಪಡೆದಿಲ್ಲ. ಈ ಯುವಕರು ಸ್ವಲ್ಪ ಮಟ್ಟಿನ ಸಹನೆಯನ್ನೂ ಅಭಿವೃದ್ಧಿಯ ಕ್ಲಿಪ್ತ ಪರಿಶೀಲನಾ ಗುಣವನ್ನೂ ತ್ಯಾಗಕ್ಕಾಗಿ ದೃಢಸಂಕಲ್ಪವನ್ನೂ ಪಡದಿದ್ದಾರೆ. ಆದರೆ ತಮ್ಮ ವೈಯಕ್ತಿಕ ಅಭಿವೃದ್ಧಿಗೆ ಅವಶ್ಯವಾದ ಶಿಸ್ತು, ಧಾರಾಳವಾದ ಶಿಕ್ಷಣ ಇವುಗಳು ಇಲ್ಲದಿರುವುದರಿಂದ ಈ ಸುಗುಣಗಳೆಲ್ಲವೂ ಕುಗ್ಗಿ ಹೋಗಿವೆ. ಅವರು ಸಾಂಸ್ಥಿಕ ಪದ್ಧತಿಗಳನ್ನು ಅನುಸರಿಸಲು ಇನ್ನೂ ಸಮರ್ಥರಾಗಿಲ್ಲ.

ಭಾರತದ ರಾಷ್ಟ್ರೀಯ ಮಹಾಸಂಸ್ಥೆಯ ಅಧ್ಯಕ್ಷರೂ ಫಾರ್‌ವರ್ಡ್ ಬ್ಲಾಕಿನ ಮಹಾನಾಯಕರೂ ಆಗಿದ್ದ ಬಾಬೂ ಸುಭಾಸಚಂದ್ರ ಬೋಸರು ಈ ಕುಂದು-ಕೊರತೆಗಳನ್ನು ಸ್ಪಷ್ಟವಾಗಿಯೂ ಸೊಗಸಾಗಿಯೂ ಒತ್ತಿ ಹೇಳಿದ್ದಾರೆ. ೧೯೩೮ ರಲ್ಲಿ ನಡೆದ ಹರಿಪುರಾ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷ ಭಾಷಣದಲ್ಲಿ ಭಾರತೀಯ ಜನ ಬಾಹುಳ್ಯದ ಶಕ್ತಿಯನ್ನೂ, ಉತ್ಸಾಹವನ್ನೂ ಒಟ್ಟುಗೂಡಿಸಿ, ಸೂಕ್ತವಾದ ಮಾರ್ಗದಲ್ಲಿ ಒಯ್ಯಲು ತರಪೇತಾದ ಸ್ವಯಂ ಸೇವಕ ದಳಗಳ ಸ್ಥಾಪನೆಗೆ ಇರತಕ್ಕ ಅತ್ಯಾವಶ್ಯಕತೆಯನ್ನು ಕುರಿತು ತಮ್ಮ ಮುಕ್ತ ಕಂಠದಿಂದ ವಿವರಿಸಿದ್ದಾರೆ. ಮುಂದುವರಿಸುತ್ತಾ ಅವರು— "ನಮ್ಮ ರಾಷ್ಟ್ರಸೇವೆಗೆ ಬದ್ಧ ಕಂಕಣರಾದ ಅಧಿಕಾರಿಗಳ ದಳವು ನಮ್ಮಲ್ಲಿದೆಯೆ? ನಮಗೆ ನಾಯಕರಾಗಲು ಶಕ್ತರಾದ ನಮ್ಮ ಪ್ರಚಂಡ ಯುವಕ ಮುಂದಾಳುಗಳಿಗೆ ನಾವೇನಾದರೂ ಸೂಕ್ತವಾದ ತರಪೇತನ್ನು ಕೊಡಲು ವ್ಯವಸ್ಥೆ ಮಾಡಿದ್ದೇವೆಯೆ? ಎಂಬೀ ಪ್ರಶ್ನೆಗಳಿಗೆ ಉತ್ತರವನ್ನು ನಾವು ಹೇಳಬೇಕಾಗಿಲ್ಲ. ಆಧುನಿಕ ರಾಜಕೀಯ ಪಕ್ಷಕ್ಕೆ ಅತ್ಯಾವಶ್ಯಕವಾದ ಈ ವಿಷಯಗಳನ್ನು ಸರಿಯಾಗಿ ರೂಪುಗೊಳಿಸಿಲ್ಲ. ಆದರೆ ಕಾಲವೇನೋ ಇಂತಹ ವ್ಯವಸ್ಥೆಗೆ ಸಿದ್ಧವಾಗಿದೆ. ಶಿಸ್ತಿನಿಂದ ಕೂಡಿದ ಸ್ವಯಂಸೇವಕರ ದಳವೂ ಅದನ್ನು ಸೂಕ್ತರೀತಿಯಲ್ಲಿ ನಡೆಸಲು ಶಿಕ್ಷಣ ಹೊಂದಿದ ಅಧಿಕಾರಿಗಳೂ, ನಮಗಿಂದು ಅತ್ಯಂತ ಅವಶ್ಯಕವಾಗಿದೆ" ಎಂದು ಹೇಳಿದರು.

ಭಾರತದಲ್ಲಿ ಕಾರ್ಯನಿರತ ಸಂಸ್ಥೆಗಳನ್ನು ಸ್ಥಾಪಿಸಲು ನಾಯಕರು ಅಷ್ಟಾಗಿ ಗಮನಕೊಟ್ಟಿಲ್ಲ. ಆದುದರಿಂದ ಯುವಕರ ಸಾಂಘಿಕ ಬೆಳವಣಿಗೆಯು ಇನ್ನೂ ರೂಪುಗೊಂಡಿಲ್ಲ. ಪುರಾತನ ಕಾಲದಲ್ಲಿದ್ದ ವಾನರ ಸೇನೆಯು

ಯುವಕರಲ್ಲಿ ಒಂದು ವಿಧವಾದ ಶಿಸ್ತಿನ ಮನೋಭಾವನೆಯನ್ನುಂಟು ಮಾಡಲು ಬಹಳ ಮಟ್ಟಿಗೆ ಸಹಕಾರಿಯಾಯಿತು. ಈಗಲೂ ಕೂಡ ಈ ವಿಧವಾದ ಮನೋಭಾವನೆಯನ್ನು ಬೆಳೆಸತಕ್ಕ ಸಂಸ್ಥೆಗಳು ಕೆಲವಿವೆ. ಅವು ಯಾವುವೆಂದರೆ— "ದೇಶ ಸೇವಾದಳಗಳು," "ರಾಷ್ಟ್ರ ರಕ್ಷಣಾದಳಗಳು" ಮತ್ತು "ಖುದಾಯಿ ಖಿದ್‌ಮತ್‌ಗಾರ್" ಸಂಸ್ಥೆಗಳು. ಇತ್ತೀಚೆಗೆ ರಾಷ್ಟ್ರ ಸೇವಾಸಂಘ ಮತ್ತು ರಾಷ್ಟ್ರಸೇವಾದಳ ಈ ಎರಡೂ ಹೆಚ್ಚಾದ ಅನುಯಾಯಿ ಗಳನ್ನು ಪಡೆದಿವೆ. ಭಾರತವು ಪೂಜಾರ್ಹವಾದ ಅಹಿಂಸಾ ತತ್ವದ ನೆರವಿ ನಿಂದ ಪ್ರತಿಭಟನಾಶಕ್ತಿಯನ್ನು ಹೊಂದುತ್ತಿದೆ. ಆತ್ಮರಕ್ಷಣೆಗೂ ಪ್ರತಿ ಭಟನಾಕಾರ್ಯಕ್ಕೂ ಅವಶ್ಯಕವಾದ ರಕ್ಷಕರ ತಂಡವನ್ನು ತರಪೇತು ಮಾಡಲು ಭಾರತದ ರಾಷ್ಟ್ರೀಯ ಮಹಾಸಂಸ್ಥೆಯು ತನ್ನ ಅಭೀಷ್ಟವನ್ನು ತೋರಿಸುವುದನ್ನು ನಾವು ಸ್ವಾಗತಿಸುತ್ತೇವೆ. ನಾವು ಸ್ವಯಂಸಿದ್ಧವಾದ ಭಕ್ತಿಯನ್ನು ಗಳಿಸಬೇಕೇ ಹೊರತು, ಭಯವನ್ನು ಬಲಾತ್ಕರಿಸಬಾರದು. ಪರಸ್ಪರ ಸಹಕಾರವನ್ನು ಬೆಳೆಸಬೇಕೇ ಹೊರತು ದಾಸ್ಯವನ್ನು ಹೊರಿಸ ಬಾರದು. ಸಾಮರ್ಥ್ಯವನ್ನು ಒಟ್ಟುಗೂಡಿಸಿ ಅದನ್ನು ಹೊಂದಬೇಕೇ ಹೊರತು ದುಷ್ಕೃತ್ಯಗಳಿಗಾಗಿ ವ್ಯರ್ಥಮಾಡಬಾರದು.

ಸಾಹಸ ಕಾರ್ಯ ಮತ್ತು ಪ್ರಯತ್ನಗಳಲ್ಲಿ ಅತ್ಯಂತ ಧೈರ್ಯವನ್ನು ಹೊಂದಿರತಕ್ಕದ್ದಾಗಿಯೂ ಪ್ರತಿಯೊಂದು ಪ್ರಾಮುಖ್ಯ ವಿಷಯಗಳ ಪರಿ ಶೀಲನೆಯಲ್ಲಿಯೂ ವೈಯಕ್ತಿಕ ಕಾರ್ಯನಿರ್ವಹಣೆಯಲ್ಲಿಯೂ ಅಥವಾ ಸಾಂಘಿಕ ಸೇವೆಯಲ್ಲಿ ಅತಿಶಯವಾದ ಶಕ್ತಿಯನ್ನು ಪಡೆದಿರತಕ್ಕದ್ದಾಗಿಯೂ ಇರುವ ಸಂಸ್ಥೆಯೆಂದರೆ ಕಾಂಗ್ರೆಸ್ಸಿನ ಸಮತಾವಾದಿಗಳ ಪಕ್ಷ. ಅದು ಪರಿ ಪಕ್ವವಾದ ಜ್ಞಾನವುಳ್ಳ ಮತ್ತು ಸ್ಪಷ್ಟವಾದ ಕಾರ್ಯವನ್ನು ಆಚರಿಸತಕ್ಕ ತರುಣರ ಗುಂಪಾಗಿದೆ. ಕಾರ್ಯರಂಗದ ದುಂದುಭಿಯು ಮೊಳಗಿದೊಡ ನೆಯೇ ಅವರು ಕಾರ್ಯನಿರ್ವಹಣೆಗೆ ಸಿದ್ಧರಾಗುತ್ತಾರೆ. ದೇಶದ ಪ್ರತಿ ಯೊಬ್ಬ ಯುವಕನೂ ಈ ಸುಗುಣಗಳನ್ನು ಅವಶ್ಯವಾಗಿ ಪಡೆದು ಅಭಿವೃದ್ಧಿ ಹೊಂದಬೇಕು ನಾವು ರಾಷ್ಟ್ರೀಯ ಕಾರ್ಯಗಳಲ್ಲಿ ಯಶಸ್ವಿಗಳಾಗಬೇಕಾ ದರೆ ಈ ಮಾನಸಿಕ ಅಭ್ಯಾಸಗಳನ್ನೆ ಮಾಡಬೇಕು. ಇದರಲ್ಲಿ ಒಂದು ವಿಧ ವಾದ ಸೌಂದರ್ಯವೂ, ಸೌಜನ್ಯವೂ ಇದೆ. ಭಾರತದ ಮತ್ತು ಯುವಕ

ಚಳುವಳಿಯ ಭವಿಷ್ಯವು ಈ ಪಕ್ಷದ ನಾಯಕರಲ್ಲಿಟ್ಟಿರುವ ನಂಬಿಕೆ ಮತ್ತು ಭರವಸೆಗಳನ್ನವಲಂಬಿಸಿದೆಯೆಂದರೆ ಅದು ತಪ್ಪಾದೀತೆ ?

---

## ೭. ಮನೆ ಮತ್ತು ಸಮಾಜ

ಯುವಕನ ಮಾರ್ಗವೇ ಅಭಿವೃದ್ಧಿಯ ಮಾರ್ಗ. ಆ ಮಾರ್ಗದಲ್ಲಿ ಅವನು ವಿವೇಚನಾಶಕ್ತಿಯೆಂಬ ದೀವಟಿಗೆಯನ್ನು ಹಿಡಿದು ಧೈರ್ಯವಾಗಿಯೂ ಖಚಿತವಾಗಿಯೂ ಸ್ಥಿರವಾಗಿಯೂ ಮುಂದೆ ನಡೆಯುತ್ತಾನೆ ಆತನು ಆರಾಧಿಸುವುದು ಮೂರು ದೇವತೆಗಳನ್ನು. ಫಲ ಮತ್ತು ಸೌಖ್ಯದಾಯಕಗಳಾದ ಕೆಲಸಗಳನ್ನು ಮಾಡಲು ಬುದ್ಧಿಯನ್ನು ಪ್ರೇರೇಪಿಸತಕ್ಕದ್ದೇ ಮನೋದೇವತೆ. ಲೇಖನ ಮತ್ತು ಭಾಷಣಗಳಿಗೆ ಆದಿದೇವತೆಯಾದ ವಾಗ್ದೇವತೆ. ಯುವಕರಿಗೆ ಒಟ್ಟುಗೂಡಿಸುವ ಮತ್ತು ಪರೀಕ್ಷಿಸುವ ಸಾಮರ್ಥ್ಯವನ್ನು ಉಂಟುಮಾಡುವುದೇ ಪ್ರಜ್ಞಾ ಮತ್ತು ಕ್ರಿಯಾದೇವತೆ. ಸ್ಥಿರವಾದ ಮಾರ್ಗದಲ್ಲಿ ಯುವಕನು ಕಷ್ಟ ಪರಂಪರೆಗಳನ್ನು ಬದಿಗೊತ್ತಿ ಮುಂದೆ ನಡೆಯುತ್ತಾನೆ.

ಆದರೆ ಈ ಯಾತ್ರೆಯಲ್ಲಿ ಅವನಿಗೆ ಒಂದು ದೊಡ್ಡ ಅಡಚಣೆಯುಂಟು. ಅದನ್ನು ಜಯಿಸಲು ಪ್ರಯತ್ನಿಸುತ್ತಾನೆ. ಆದರೆ ಅದು ಬಹಳ ಕಠಿಣವಾದ್ದರಿಂದ ಅದನ್ನುರುಳಿಸಲು ಬಹಳ ಕಷ್ಟಪಡುತ್ತಾನೆ. ವಯೋವೃದ್ಧರೇ ಆ ಅಡಚಣೆ. ಅವರೇ ಪ್ರಾಚೀನಾಭಿಪ್ರಾಯ ಮತ್ತು ಪದ್ಧತಿಗಳಿಂದ ಒಡಗೂಡಿ ಪ್ರಗತಿಗೆ ಅಡ್ಡವಾಗಿರುವ ರಾಕ್ಷಸರು. ಅವರು ಮಾಡುವ ಕೆಲಸವೇನೆಂದರೆ— ಶಾಲೆಗಳಲ್ಲಿಯೂ ಶಿಶುವಿಹಾರಗಳಲ್ಲಿಯೂ ದಂಡಧಾರಿಗಳಾಗಿ ಪ್ರಪಂಚವೇ ವಿವೇಕ ಶೂನ್ಯವಾಗಿದೆಯೆಂದೂ ಮತ್ತು ಸಾಮರ್ಥ್ಯವೇ ನ್ಯಾಯವೆಂದೂ ಸಾಧಿಸುತ್ತಾರೆ. ಇದರಿಂದ ಉತ್ಸಾಹಶಾಲಿಗಳಾದ ಯುವಕರ ಕೊರಳಿಗೆ ಪಾಶ ಬಿಗಿದಂತಾಗಿ ಅವರ ಮನೋವಾಕ್ಕಾಯ ಕರ್ಮಗಳ ರೀತಿಯೇ ಪ್ರತಿಬಂಧಕವನ್ನು ಪಡೆಯುತ್ತವೆ. ಬಾಲಕಿಯರ ವಿವಾಹಕ್ಕೂ ಬಾಲಕರ ಆಟಗಳಿಗೂ ಅಡಚಣೆಯುಂಟಾಗಿದೆ. ಅಡಚಣೆ, ಅಂಕೆ, ಮತ್ತು ಅಧಿಕಾರ ಇವೇ ಪ್ರಧಾನವಾಗಿವೆ.

ನಮ್ಮ ಸಹವಾಸವೆಲ್ಲ ಗುಮಾಸ್ತರೊಂದಿಗೆ; ನಮ್ಮ ಆರೋಗ್ಯವಾದರೋ ಸದಾ ಹೀನಸ್ಥಿತಿಯಲ್ಲಿಯೇ ಇದೆ. ಅನಿರ್ವಚನೀಯವಾದ ಇನ್ನೂ ಅನೇಕ ತೊಂದರೆಗಳುಂಟು; ನಮ್ಮ ಗೃಹಜೀವನದಲ್ಲಿ ಉಂಟಾದ ಔದಾಸೀನ್ಯವೇ ಈ ದುಷ್ಪರಿಣಾಮವಾಗಿದೆ.

ಭಾರತೀಯ ಗೃಹಜೀವನಕ್ಕೆ ಅಧಿಕಾರವೇ ಮುಖ್ಯವಾಗಿದೆ. ಸಂಕೋಲೆಗಳಿಂದ ಬಂಧಿತರಾದ ನಾವು ಈ ಜೀವನ ಯಾತ್ರೆಯಲ್ಲಿ ನಿರಾಶೆ ಮತ್ತು ಪಾರತಂತ್ರ್ಯವನ್ನಲ್ಲದೆ ಇನ್ನು ಏನನ್ನೂ ಹೊಂದಲಾರೆವು. ಕರ್ತವ್ಯಗಳ ಪ್ರಾಮುಖ್ಯತೆಗೆ ಅಡಿಗಡಿಗೂ ನಮ್ಮನ್ನು ಒಯ್ಯುತ್ತಿದ್ದಾರೆ; ಮತ್ತು ಪ್ರಪಂಚದ ಸಾಮಾಜಿಕ ನ್ಯೂನತೆಗಳಿಗೆ ಪರಸ್ಪರ ಪರಾಧೀನತೆಯೇ ರಾಜಮಾರ್ಗವೆಂದು ಹೇಳುತ್ತಿದ್ದಾರೆ. ಆದರೆ ಸ್ವಾತಂತ್ರ್ಯ ಪ್ರಿಯರಾದ ಜನರು ಮಾನವನು ಸ್ವತಂತ್ರವಾಗಿ ಬಾಳಲು ಕಲಿಯದೆ ಹೋದ ಪಕ್ಷದಲ್ಲಿ ಪರಸ್ಪರ ಸಾಹಾಯಕ ಫಲಗಳನ್ನು ಅರಿಯಲು ಅಥವಾ ಅನುಭವಿಸಲು ಸಮರ್ಥನಾಗಲಾರನು—ಎಂಬುದನ್ನು ಸಾಧಿಸಲು ಬಹಳವಾಗಿ ಪ್ರಯತ್ನಪಡುತ್ತಿದ್ದಾರೆ. ಪ್ರಾಯಶಃ ಜೀವನದ ಸುಖಗಳನ್ನು ಸವಿಯಲು ವೈಯಕ್ತಿಕ ಹಕ್ಕುಗಳ ಅಗತ್ಯವಿಲ್ಲದಿದ್ದರೂ, ವೈಯಕ್ತಿಕ ಜೀವನದಲ್ಲಿ ಆ ಹಕ್ಕುಗಳು ಪ್ರಾಮುಖ್ಯತೆಯನ್ನು ಹೊಂದಿವೆ. ಆದರೆ ನಮ್ಮ ಗೃಹಜೀವನವು ಇವೆಲ್ಲಕ್ಕೂ ವ್ಯತಿರಿಕ್ತವಾಗಿದೆ. ಸ್ವಾತಂತ್ರ್ಯದ ತಿರುಳನ್ನು ನಿರ್ಮೂಲ ಮಾಡಿರುವುದಲ್ಲದೆ, ಅದು ಸಂಪೂರ್ಣವಾದ ಮತ್ತು ಸ್ವತಂತ್ರವಾದ ಜೀವನಕ್ಕೆ ನಮ್ಮಲ್ಲಿ ಇರಬೇಕಾದ ಹಂಬಲವನ್ನೂ ಹಾಳುಮಾಡಿದೆ. ಭಾರತೀಯ ಕುಟುಂಬವು ಯಾವ ವಿಧದಲ್ಲಿಯೂ ಉತ್ಕೃಷ್ಟತೆಯನ್ನು ಪಡೆದಿಲ್ಲವೆಂಬುದನ್ನು ನೆನಪಿನಲ್ಲಿಡೋಣ.

ಪ್ರತಿಯೊಬ್ಬ ವ್ಯಕ್ತಿಯೂ ಸಂಸಾರದಲ್ಲಿ ಪ್ರಥಮಪಾಠಗಳನ್ನು ಪಡೆಯುತ್ತಾನೆಂಬುದು ನಿಜವಿರಬಹುದು. ಸಂಸಾರದಲ್ಲಿಯೇ ನಾಗರಿಕನಾಗುವ ತರಬೇತು ಮತ್ತು ಸಾಂಘಿಕ ತರಬೇತು ಪ್ರಾರಂಭವಾಗುತ್ತದೆ. ನಿಜವಾಗಿಯೂ ಅವನು ಪ್ರೀತಿಸುವುದನ್ನೂ ಪ್ರಶಂಸಿಸುವುದನ್ನೂ ಮತ್ತು ತನ್ನ ಸಹೋದ್ಯೋಗಿಗಳ ಸಹಾಯ ಮತ್ತು ಬೆಂಬಲಗಳಿಂದ ಒಟ್ಟಿಗೆ ವಾಸಮಾಡುವುದನ್ನು ಕಲಿಯಲೇಬೇಕಾಗುತ್ತದೆ. ಮಾನವ ಪ್ರಕೃತಿಯಲ್ಲಿ ಪ್ರಶಂಸನೀಯವಾದುದೆಲ್ಲವನ್ನೂ ವ್ಯಕ್ತಿಗೂ, ಅವನ ನಡತೆಗೂ ಮತ್ತು ಅವನ

ಸಂಸ್ಥೆಗೂ ಕೊಡತಕ್ಕ ಕೆಲವು ಸನ್ನಿವೇಶಗಳುಂಟು. ಪ್ರಾಯಶಃ ಬದ್ಧಿಯೂ ಮತ್ತು ನೀತಿಯೂ ಕೇವಲ ಇಲ್ಲಿಯೇ ಪ್ರಾರಂಭವಾಗುತ್ತವೆ. ಶಿಸ್ತು, ಹೊಂದಿಕೆ ಮತ್ತು ಸಹಕಾರ ಈ ತತ್ವಗಳನ್ನು ಇಲ್ಲಿಯೇ ಕಲಿಯಬೇಕು. ಆದರೆ ಈಗಿರುವ ಕುಟುಂಬಗಳಲ್ಲಿ, ವ್ಯವಸ್ಥೆ ಹೊಂದಿದ ಕುಟುಂಬಗಳಲ್ಲಿ ನಮಗೆ ಆ ವಿಧವಾದ ತರಬೇತು ಸಿಗುತ್ತಿಲ್ಲ. ಗೃಹಜೀವನದಲ್ಲಿ ನಾವು ಪಡೆಯುತ್ತಿರುವುದು ಅಧಿಕಾರವೊಂದೇ. ದಾಸ್ಯ, ಪರಾಧೀನತೆ, ಅಸಹಾಯತೆ, ಔದಾಸೀನ್ಯ, ದ್ವೇಷ ಮತ್ತು ಆಲಸ್ಯ,—ಇವೆಲ್ಲವೂ ನಮ್ಮ ಹಿಂದಿನವರಿಂದ ಬಂದ ಗುಣಗಳು. ಖಂಡಿತವಾಗಿಯೂ ನಮ್ಮ ಭವಿಷ್ಯವು ಕೀರ್ತಿ ಸೌಖ್ಯಗಳಿಂದ ಕೂಡಿ ಮನೋರಂಜಕವಾಗಿರಲಾರದು. ಕುಟುಂಬದ ಸುಮಾರು ೨೦–೨೫ ಜನರ ಪ್ರೇರಣೆಯಿಂದಲೂ, ಮತ್ತು ಬಲವಾದ ಒತ್ತಾಯದಿಂದಲೂ, ನಮ್ಮ ಕಾರ್ಯತತ್ಪರತೆಯ ಪ್ರಯತ್ನಗಳಿಗೆ ತಡೆಯಾಗಿವೆ. ಈ ೨೦–೨೫ ಜನರಲ್ಲಿ ಅರ್ಧಭಾಗ ವಯೋವೃದ್ಧರಾಗಿ ಜಡತ್ವದ ಅಪರಾವತಾರಗಳಾಗಿದ್ದಾರೆ.

ಭಾರತದ ಅವಿಭಕ್ತ ಕುಟುಂಬವು ಎರಡು ಜನಾಂಗಗಳನ್ನೊಳಗೊಂಡ ಒಂದು ರಾಷ್ಟ್ರವಿದ್ದಂತೆ. ಈ ಜನಾಂಗಗಳು ಯಾವಾಗಲೂ ಪರಸ್ಪರ ವೈರಿಗಳಾಗಿ ಇರುತ್ತವೆ. ಭಾರತದಲ್ಲಿರುವ ಜಾತಿಗಳಲ್ಲೆಲ್ಲಾ ಈ ಅವಿಭಕ್ತ ಕುಟುಂಬ ಪದ್ಧತಿಯು ಅನೂಚಾನವಾಗಿ ಒಂದು ಚಿರಸ್ಥಾಯಿಯಾಗಿದೆ. ಆಧುನಿಕ ಅಂದರೆ ಪಾಶ್ಚಿಮಾತ್ಯ ರೀತಿಯು ಕೆಲವರನ್ನು ಮಾತ್ರ ಮಾರ್ಪಡಿಸಿದೆ. ನಮ್ಮಲ್ಲಿ ಅನೇಕ ಮಂದಿ ಈ ಪ್ರಾಚೀನ ಪದ್ಧತಿಗೆ ತಲೆಬಾಗಿ ನಿಂತಿದ್ದೇವೆ. ಆದುದರಿಂದಲೇ ಕುಟುಂಬದಲ್ಲಿ ಅಂತಃಕಲಹಗಳು ಸದಾ ವೈಷಮ್ಯಗಳನ್ನುಂಟುಮಾಡುವವು. ಪಾಶ್ಚಿಮಾತ್ಯ ಜೀವನದ ರೂಪರೇಖೆಗಳ ವ್ಯಾಸಂಗವು ನಮ್ಮ ದೇಶದ ಯುವಕರಿಗೂ ಕೂಡ ಫಲದಾಯಕವಾಗಿ ಅವರಲ್ಲಿ ತಿಳಿವಳಿಕೆ ಮತ್ತು ದಯೆ, ಸಹನೆ ಮತ್ತು ಸಹಕಾರ ಇವುಗಳನ್ನು ವೃದ್ಧಿಗೊಳಿಸುತ್ತದೆಯೇ ಎಂಬುದು ಸಂಶಯವಾಗಿದೆ.

ಈ ಅವಿಭಕ್ತ ಕುಟುಂಬ ಪದ್ಧತಿಯನ್ನು ಬಲಪಡಿಸತಕ್ಕ ಎರಡು ಶಕ್ತಿಗಳಿವೆ. ನಮ್ಮ ರೈತನ ನಡೆನುಡಿಗಳನ್ನು ಅವಲಂಬಿಸಿರತಕ್ಕ ಶಾಶ್ವತ ರೀತಿಯೇ ಮೊದಲನೆಯದು. ಅವನು ಹೊಲಗದ್ದೆಗಳಲ್ಲಿರುವಾಗ ಸಾಕಾ

ದಷ್ಟು ಕೆಲಸವನ್ನು ಹೊಂದಿರುವುದಿಲ್ಲ—ಆದುದರಿಂದ ಅನೇಕ ವೇಳೆ ಅವನು ಬೇರೆ ಕಡೆ ಕೆಲಸವನ್ನು ಹುಡುಕುತ್ತಾನೆ. ಹೊರಗಿರುವ ಸ್ನೇಹಿತರ ಮತ್ತು ಬಂಧುಗಳ ತಾತ್ಕಾಲಿಕ ಸಂಪರ್ಕಗಳಿಂದ ಹೊಸ ಮತ್ತು ಫಲದಾಯಕಗಳಾದ ಸಂಬಂಧವನ್ನು ಹೊಂದುತ್ತಾನೆ. ತಾತ್ಕಾಲಿಕವಾದ ಈ ಯುದ್ಧದ ಪ್ರಾರಂಭವೇ ಎರಡನೆಯ ಕಾರಣವಾಗಿದೆ. ಹೇಗೆಂದರೆ ಯುದ್ಧದಲ್ಲಿ ಕೆಲಸಕ್ಕೆ ಸೇರಲು ಸಾವಿರಾರು ಜನರು ತಮ್ಮ ಊರು ಕೇರಿಗಳನ್ನು ಬಿಟ್ಟು ಕೇಂದ್ರ ಸ್ಥಳಗಳಿಗೆ ಹೋಗಬೇಕಾಯಿತು. ಆದ್ದರಿಂದ ಒಂದು ಕುಟುಂಬದ ದೂರದ ಮತ್ತು ಹತ್ತಿರದ ಬಂಧುಗಳೆಲ್ಲರೂ ಒಂದೇ ಕಡೆ ವಾಸಮಾಡಲು ಅನುಕೂಲ ವಾಯಿತು.

ಹೀಗೆ ಏಕೀಭವಿಸಿ ವಾಸ ಮಾಡುವುದಕ್ಕೆ ಬಲಾತ್ಕರಿಸತಕ್ಕ ಸನ್ನಿವೇಶ ಗಳು ವ್ಯಕ್ತಿಯ ಆರ್ಥಿಕ ದಾಸ್ಯಕ್ಕೆ ಈಡುಮಾಡುವುದಲ್ಲದೆ, ಆ ವ್ಯಕ್ತಿಯ ಬುದ್ಧಿ ಮತ್ತು ಆಲೋಚನಾ ಶಕ್ತಿಗಳನ್ನು ಕುಂದು ಮಾಡಿ, ಪರಸ್ಪರ ವಿರೋಧ ಮತ್ತು ಕಲಹಗಳಿಗೆ ಅವಕಾಶವನ್ನುಂಟು ಮಾಡುತ್ತವೆ. ಭಿನ್ನಾ ಭಿಪ್ರಾಯವೇ ಅವಿಭಕ್ತ ಕುಟುಂಬ ಜೀವನದ ಕ್ಷಿಪ್ರಫಲ.

ಈ ಸಂದರ್ಭದಲ್ಲಿ ನಾವು ಎರಡು ನೀತಿಗಳನ್ನು ವಿವರಿಸಬೇಕಾಗಿದೆ. ನಾವು ಆಗಲೇ ಹೇಳಿದಂತೆ ಭಾರತೀಯ ಜೀವನವು ನಿರ್ಜೀವದಿಂದಿದೆ. ಯಾವ ಕೆಲಸಕ್ಕೂ ಅಥವಾ ಯೋಚನೆಗೂ ಆವೇಶ ಪೂರಿತವಾದ ಉತ್ಸಾಹವೇ ಇಲ್ಲ. ಅದರ ವಿಷಯವಾಗಿ ನಾವು ವಿಶದವಾದ ಅಭಿಪ್ರಾಯವನ್ನು ಪಡೆಯ ಬೇಕಾದರೆ ಹಲವು ಪಾಶ್ಚಿಮಾತ್ಯ ಕುಟುಂಬಗಳ ಉತ್ಸಾಹಪೂರಿತ ಜೀವನಕ್ಕೆ ಪ್ರತಿಯಾಗಿ ಹೋಲಿಸಬೇಕಾಗುತ್ತದೆ. ನಾವು ಆಧುನಿಕ ಪಾಶ್ಚಿಮಾತ್ಯ ಕುಟುಂಬಗಳ ಅನೇಕ ನೀತಿಗಳನ್ನು ಖಂಡಿಸಬಹುದು. ಆದರೆ ಈ ಒಂದು ಮುಖ್ಯಾಂಶವನ್ನು ನಾವು ಗಣನೆಗೆ ತೆಗೆದುಕೊಳ್ಳದೇ ಹೋದರೆ ಸಾಮಾಜಿಕ ಬೆಳವಣಿಗೆಗೆ ಬೆನ್ನು ಮೂಳೆಯಂತಿರುವ ಈ ಸಾಮಾಜಿಕ ನೀತಿ ಶಾಸ್ತ್ರದ ಅಜ್ಞಾನವನ್ನು ನಾವು ಪರರಿಗೆ ತೋರ್ಪಡಿಸುವುದಲ್ಲದೆ ಹಳೇ ಕಂದಾಚಾರದ ಸಾಮಾಜಿಕ ಪದ್ಧತಿಗಳಿಗೆ ನಮ್ಮ ಬಲವಾದ ಅಭಿಲಾಷೆಯನ್ನು ತೋರಿಸಿ ದಂತಾಗುವುದು. ಉದಾಹರಣೆಗೆ ಒಂದು ನೂತನ ಯುವಕ ದಂಪತಿಗಳನ್ನು ತೆಗೆದುಕೊಳ್ಳೋಣ. ಈ ಆದರ್ಶ ದಂಪತಿಗಳು ಸಾಯಂಕಾಲ ಬಹಳ

ಸಂತೋಷದಿಂದ ಗಾಳಿ ಸಂಚಾರಕ್ಕೆ ಹೋಗುತ್ತಾರೆಂದು ಭಾವಿಸೋಣ. ಪರಸ್ಪರ ಸಂಭಾಷಣೆಯಲ್ಲಿ ಅವರು ಅತ್ಯಂತ ಆಸಕ್ತಿಯನ್ನು ಅನುಭವಿಸುವುದಲ್ಲದೆ ಕಲಾಪರಿಪೂರ್ಣವಾದ ತಮ್ಮ ಜೀವನದಲ್ಲಿ ಮನೋವಿಕಾಸವನ್ನುಂಟು ಮಾಡತಕ್ಕ ಚರ್ಚೆಗಳಲ್ಲಿ ಸಂತೋಷವನ್ನು ಹೊಂದುತ್ತಾರೆ. ತಮ್ಮ ಜೀವನದಲ್ಲಿ ಅವರು ಉತ್ಸಾಹಭರಿತರಾಗಿಯೂ, ತಮ್ಮ ಪ್ರೇಮಕಲಹಗಳಲ್ಲಿ ಸಮರ್ಥರಾಗಿಯೂ ಮತ್ತು ತಮ್ಮ ತ್ಯಾಗಗಳಲ್ಲಿ ಸುರಕ್ಷಿತ ಮತ್ತು ಖಂಡಿತವಾಗಿಯೂ ಇರುತ್ತಾರೆ. ಅಂತಹ ಜನರ ಜೀವನವನ್ನು ಯಥೇಚ್ಛವಾದ ವಿವಾದಗಳ ತಿಳುವಳಿಕೆಗೆ ಆವರಿಸಿದೆಯೆಂದು ನಮಗೆ ಚನ್ನಾಗಿ ಗೋಚರವಾಗುತ್ತದೆ. ಆದರೆ ಭಾರತೀಯ ಕುಟುಂಬಗಳ ಪ್ರತಿಯೊಂದು ಯೋಚನೆ ಮತ್ತು ಕೆಲಸಗಳಲ್ಲಿ ನಿಸ್ಸಾರವೂ, ನಿರುತ್ಸಾಹವೂ ಇವೆ. ನಮ್ಮ ಭಾರತೀಯ ಜೀವನವು ವಿಚಿತ್ರವಾಗಿದೆ ಏಕೆಂದರೆ ನಾವು ನಮ್ಮ ಪ್ರೀಯರ ಪರಾಧೀನತೆಗೆ ಒಪ್ಪಿಗೆಯನ್ನಿತ್ತಿದ್ದೇವೆ. ಈ ಅವಿಭಕ್ತಕುಟುಂಬದಲ್ಲಿ ಹೆಂಗಸು ಖಂಡಿತವಾಗಿಯೂ ಪರಾಧೀನಳು. ಮತ್ತು ಕೆಲವು ವ್ಯಕ್ತಿಗಳ ಅವನತಿಯನ್ನೂ ಕಾಣಬಹುದು. ಭಾರತದ ಸ್ತ್ರೀಯು ಶಾಶ್ವತವಾದ ದಾಸ್ಯವನ್ನು ಅನುಭವಿಸಿದ್ದಾಳೆ. ಇತ್ತೀಚಿನವರೆಗೂ ಅವಳ ಇರುವಿಕೆಯೇ ಲಕ್ಷ್ಯಕ್ಕೆ ಬಂದಿರಲಿಲ್ಲ. ಆದರೆ ಪರಕೀಯ ಬೆಳವಣಿಗೆಗಳ ಪ್ರಭಾವದಿಂದ ಅವಳು ತನ್ನ ಪರದೆಯಿಂದ ಸ್ವಲ್ಪಮಟ್ಟಿಗೆ ಹೊರಕ್ಕೆ ಬಂದು, ತನ್ನ ವ್ಯಕ್ತಿತ್ವವನ್ನು ಪಡೆದಿದ್ದಾಳೆ. ಆದರೂ ತನ್ನ ಸಾಹಸ ಕ್ರಿಯೆಗಳಲ್ಲಿ ಒಂದು ನಿರಾಶಾಭಾವನೆಯೇ ಅವಳನ್ನು ಆವರಿಸಿರುತ್ತದೆ. ಆಧುನಿಕ ಯುದ್ಧವು ಹೆಂಗಸನ್ನು ಧ್ಯಾನನಿಮುಕ್ತಳನ್ನಾಗಿ ಮಾಡಿ ತನ್ನ ಒಂದು ಹೊಸವಿಧವಾದ ವ್ಯಕ್ತಿತ್ವವನ್ನು ಮತ್ತು ಹೆಚ್ಚಿನ ಗೌರವವನ್ನು ಪಡೆಯಲು ಅವಕಾಶವನ್ನು ಕಲ್ಪಿಸಿದೆ.

ನಾವು ಮೇಲೆ ಸೂಚಿಸಿದಂತಹ ಒಂದು ಮಹತ್ತರವಾದ ಪ್ರಭಾವವಿದ್ದ ಪಕ್ಷದಲ್ಲಿ ನಮ್ಮನ್ನು ನೈತಿಕ ಮತ್ತು ಸಾಮಾಜಿಕ ಹೀನಸ್ಥಿತಿಗೆ ಒಯ್ಯುತಕ್ಕ ಬುದ್ಧಿ ಶಕ್ತಿಗಳ ಕುಗ್ಗುವಿಕೆಯನ್ನೂ ನಿರಾಶೆಯನ್ನೂ ಅನುಭವಿಸಲೇಬೇಕಾಗುತ್ತದೆ. ಸನ್ನಿವೇಶಗಳೂ, ತರಪೇತು, ಪುಸ್ತಕಗಳು, ಮತ್ತು ಚಳುವಳಿಗಳು ನಮ್ಮನ್ನು ಕೇವಲ ಅಲ್ಪವನ್ನಾಗಿ ಮಾಡಿ, ಜೀವನದಲ್ಲಿ ಜಿಗುಪ್ಸೆಯನ್ನುಂಟು ಮಾಡುತ್ತವೆ.

ವೈಯಕ್ತಿಕ ಸ್ವಾತಂತ್ರ್ಯವನ್ನು ನಿಜವಾಗಿಯೂ ಬೆಳಸತಕ್ಕ ಒಂದು ರೀತಿಯಿದೆ. ಈ ಕುಟುಂಬಕ್ಕೂ ಬಂಧುವರ್ಗಕ್ಕೂ ನಮ್ಮಲ್ಲಿರುವ ಕೃತಕವಾದ ಮತ್ತು ಪದ್ಧತಿಗನುಸಾರವಾಗಿ ಬಂದ ಅಧೀನತೆಯನ್ನು ತೊರೆದರೆ ನಾವು ಮಾನವಕೋಟಿಯ ಅಗಾಧವಾದ ಪ್ರೇಮವನ್ನು ಬೆಳಸಬಹುದು. ಈ ವಿಧವಾದ ಭಾವನೆಯು ಖಂಡಿತವಾಗಿಯೂ ಮಾನವನ ಸ್ವಭಾವವನ್ನು ಪರಿಶುದ್ಧಮಾಡಿ ಅವನನ್ನು ರಚನಾತ್ಮಕ ಕೆಲಸಗಳಿಗೆ ಕೈಹಾಕಲು ಬಲಾತ್ಕರಿಸುತ್ತದೆ. ಕುಟುಂಬಕ್ಕೂ ಮತ್ತು ಕಿರಿಯ ಸಂಘಕ್ಕೂ ಮೈತ್ರಿಯನ್ನು ಬಿಡವಂತೆ ಮಾಡುತ್ತದೆ.

ಮೆಕ್‌ಡೌಗಲ್ ಎಂಬುವನು ಹೇಳಿರುವುದೇನಂದರೆ, ನಮ್ಮ ತಾಯಿ ತಂದೆಗಳ ಅಧೀನದಲ್ಲಿದ್ದು ಅವರ ಬೈಗಳನ್ನು ಸಹಿಸಿಕೊಂಡಿರುವುದೇ ಒಳ್ಳೆಯದು ಅದು ಒಂದು ಸಮಂಜಸವಾದ ·ಸಾಮಾಜಿಕ ಅಸ್ತಿತ್ವಕ್ಕೆ ಅನುಕೂಲತೆಯನ್ನು ಕಲ್ಪಿಸಿಕೊಡುತ್ತದೆ. ಆದ್ದರಿಂದ ಅದು ಅತ್ಯಾವಶ್ಯಕವೆಂದು ಕೆಲವರು ಹೇಳುತ್ತಾರೆ. ಆದರೆ ಅದು ನಿಸ್ಸಂದೇಹವಾಗಿಯೂ ವ್ಯಕ್ತಿಪರಾಧೀನತೆಯನ್ನೊಳಗೊಂಡಿರುವುದರಿಂದ ಮಾನವನ ಶಕ್ತಿ ಮತ್ತು ಜೀವನವನ್ನು ಹಾಳು ಮಾಡುತ್ತಾ ಇದೆ.

ನಮ್ಮ ದೇಶದ ಜನರ ಗೃಹಜೀವನವು ನಿರಾಶೆಯನ್ನುಂಟು ಮಾಡತಕ್ಕದ್ದಾಗಿದೆ. ಮನೆಯ ವಿಷಯದಲ್ಲಿ ಯಾವುದು ಸತ್ಯವೋ ಸಮಾಜದ ವಿಷಯದಲ್ಲಿಯೂ ಹಾಗೆಯೇ. ಸಾಮಾಜಿಕ ವೈಷಮ್ಯದ ಒತ್ತಡವು ದುರಭ್ಯಾಸಗಳಿಗೂ ಮತ್ತು ದುರ್ಮಾರ್ಗಗಳಿಗೂ ಕಾರಣವಾಗಿರುತ್ತದೆ.

ಅವಿಭಕ್ತ ಕುಟುಂಬವನ್ನು ನಿರಂಕುಶಾಧಿಕಾರಕ್ಕೆ ಹೋಲಿಸಬಹುದು. ಅದರಲ್ಲಿ ಸಂಸ್ಥೆಯ ಔನ್ನತ್ಯವು ಹಲವರ ಅಧಿಕಾರವೂ ಮತ್ತು ವೈಯಕ್ತಿಕ ಬುದ್ಧಿ ಮತ್ತು ಆತ್ಮೀಯತೆಯ ಸಂಪೂರ್ಣ ನಾಶವೂ ಇದೆ. ಮಾನವ ವ್ಯಕ್ತಿಯ ಪ್ರಾಮುಖ್ಯತೆಯು ಅಲ್ಲಿರಬೇಕಾದುದು ನ್ಯಾಯವೇ ಆಗಿರುತ್ತದೆ. ಮತ್ತು ಎಲ್ಲಾ ಸಾಮಾಜಿಕ ಸಂಸ್ಥೆಗಳು ಮಾನವ ಪ್ರಯತ್ನವನ್ನು ಸರಿಯಾದ ರೀತಿಯಲ್ಲಿ ವಿಕಾಸಗೊಳಿಸಲು ಸಾಮರ್ಥ್ಯವನ್ನು ಪಡೆದಿರಬೇಕು.

# ೮. ರಾಷ್ಟ್ರೀಯ ಸ್ಥಾವರತೆ

"ರಾಷ್ಟ್ರೀಯ ಸ್ವಭಾವ" ಎಂಬ ಬಹಳ ಉಪಯುಕ್ತವಾದ ಪುಸ್ತಕದಲ್ಲಿ ಅರ್ನೆಸ್ಟ್‌ಬಾರ್ಕರ್ ಎಂಬ ಮಹಾಶಯನು ಸಾಮಾಜಿಕ ಸ್ವರೂಪದ ಬೆಳವಣಿಗೆಗೆ ಅವಶ್ಯಕವಾದ ಮುಖ್ಯ ಅಂಶಗಳನ್ನು ಬಹಳ ಚೆನ್ನಾಗಿ ಪ್ರಸ್ತಾಪಿಸಿದ್ದಾನೆ. ಪ್ರಾಯಶಃ ಅವನು ಹೇಳಿರುವ ಮೂಲ ತತ್ವಗಳನ್ನು ನಾವು ಈಗ ರಾಷ್ಟ್ರೀಯ ಸ್ವರೂಪದ ವಿಷಯವಾಗಿ ಫಲದಾಯಕವಾಗುವಂತೆ ಮಾಡಲು ಸಾಧ್ಯವಿಲ್ಲ. ಸಾಮಾಜಿಕ ಅಥವಾ ಮಾನವ ಸ್ವರೂಪದ ಕಡೆಗೆ ಲಕ್ಷ್ಯವಿಡಬೇಕಾಗಿದೆ. ಆದರೂ ಬಾರ್ಕರ್‌ನಿಂದ ವಿವರಿಸಲ್ಪಟ್ಟ ಅಂಶಗಳನ್ನು ಈ ಪ್ರಕಾರ ಸಂಕ್ಷೇಪಿಸೋಣ.

ಅವನ ಮಾತಿನ ಪ್ರಕಾರ ರಾಷ್ಟ್ರವೆಂದರೆ ಆಧ್ಯಾತ್ಮಿಕ ಮೇಲ್ಕಟ್ಟಡವನ್ನೊಳಗೊಂಡ ಭೌತಿಕ ತಳಹದಿ. ಈ ಭೌತಿಕ ತಳಹದಿಯಲ್ಲಿ ಐದು ಮುಖ್ಯ ವಸ್ತುಗಳನ್ನು ಕಾಣಬಹುದು. ಅವು ಯಾವುವೆಂದರೆ ಜಾತಿ, ಪ್ರದೇಶ, ವಾಯುಗುಣ, ಜನಸಂಖ್ಯೆ ಮತ್ತು ವ್ಯಕ್ತಿ. ಪ್ರಾಕೃತಿಕ, ಆರ್ಥಿಕ, ಮತ್ತು ಭೂಗೋಳಕ್ಕೆ ಸಂಬಂಧಿಸಿದ ಅಂಶಗಳಿಂದ ಇವು ಉಂಟಾಗಿವೆ. ಪ್ರೊ|| ಬಾರ್ಕರ್‌ನು ಇವುಗಳಲ್ಲೆಲ್ಲಾ ಆರ್ಥಿಕ ಅಂಶವೇ ಬಹು ಮುಖ್ಯ ಮತ್ತು ಫಲದಾಯಕ ಎಂಬುದಾಗಿ ಒತ್ತಿ ಹೇಳುತ್ತಾನೆ. ಅವನು ಹೇಳುವುದು ಸರಿಯೆಂದು ತೋರುತ್ತದೆ. ಅವನು ಮುಂದುವರಿಯುತ್ತಾ— "ನಾವು ಈ ಅಂಶದ ಪರಿಣಾಮವನ್ನು ಒಂದು ಜನಾಂಗದ ಜನಸಾಂದ್ರತೆ, ವಿಭಾಗ ಮತ್ತು ಉದ್ಯೋಗ ಇವುಗಳ ಮೇಲೆ ಕಾಣಬೇಕಾಗುತ್ತದೆ." ಎಂದು ಹೇಳಿದ್ದಾನೆ.

ಆಧ್ಯಾತ್ಮಿಕ ಅಂಶಗಳಲ್ಲಿ ಮೊದಲನೆಯದಾಗಿ ರಾಜಕೀಯ ಮತ್ತು ವ್ಯಾವಹಾರಿಕ ಸಂಸ್ಥೆಗಳನ್ನೂ ಎರಡನೆಯದಾಗಿ ಮತೀಯ ಸಂಸ್ಥೆಗಳನ್ನೂ, ಮೂರನೆಯದಾಗಿ ಸಾಹಿತ್ಯ ಪರಿಷತ್ತುಗಳನ್ನೂ ಮತ್ತು ವಿಧ್ಯಾವರ್ಧಕ ಸಂಸ್ಥೆಗಳನ್ನೂ ಉದಾಹರಿಸುತ್ತಾನೆ. ಇವೆಲ್ಲವೂ ಒಂದು ಬಲಯುತವಾದ ಸಂಸ್ಥೆಯಲ್ಲಿ ಸೇರಿ "ರಾಷ್ಟ್ರೀಯ ಸಮಾಜದ ಸದಸ್ಯರನ್ನು ಒಟ್ಟುಗೂಡಿಸಿ, ಅವರ ಪರಸ್ಪರ ಬಾಂಧವ್ಯವನ್ನು ರೇಷ್ಮೆಯಂತೆ ಮೃದುವಾಗಿಯೂ ಮತ್ತು ಉಕ್ಕಿ

ನಂತೆಭದ್ರವಾಗಿಯೂ, ಇರುವಂತೆ ಮಾಡುತ್ತದೆ. ಈ ಶಕ್ತಿಗಳಿಂದಲೇ ನಾವು ರಾಷ್ಟ್ರ ನಿರ್ಮಾಣದ ಭೌತಿಕ ತಳಹದಿಯನ್ನು ಕೇವಲ ಕ್ರಮ ಪಡಿಸುವುದು ಬದಲಾಯಿಸುವುದು ಅಲ್ಲದೆ ಸಂಪೂರ್ಣವಾಗಿ ಅದನ್ನು ಮಾರ್ಪಡಿಸಿ ಒಂದು ಕ್ರಾಂತಿಯನ್ನೇ ಎಬ್ಬಿಸಬಹುದು.

ಅನಾದಿಯಿಂದಲೂ ನಮ್ಮ ಜೀವನವನ್ನು ಮತ್ತು ಸ್ವಭಾವವನ್ನು ಚೆನ್ನಾಗಿ ರೂಪು ಗೊಳಿಸುತ್ತಿರುವ ಅಂದವೇ ನಮ್ಮ ಮತಧರ್ಮ. ನ್ಯಾಯ ಮತ್ತು ಸರ್ಕಾರ, ಭಾಷೆ, ಮತ್ತು ವಿದ್ಯಾಭ್ಯಾಸ, ಇವುಗಳೂ ಬದಲಾಯಿಸಿವೆ. ಮತ್ತು ತಮ್ಮ ನಾನಾ ವಿಧವಾದ ಪರಿಣಾಮ ವನ್ನು ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಬೀರಿವೆ. ನಮ್ಮ ಮತ ಧರ್ಮವು ನಮಗೆ ಮುಖ್ಯವಾಗಿ ಸಹನೆಯನ್ನು ಕಲಿಸಿದೆ. ನಾವು ಮೇಲೆ ವಿವರಿಸಿದ ಇತರ ಆಧ್ಯಾತ್ಮಿಕ ಅಂಶಗಳು ಐಹಿಕ ಮೂಲವನ್ನೊಳಗೊಂಡಂತೆ ತೋರು ವುವು. ಆದರೆ ನಿಜವಾಗಿಯೂ ಅವು ಮಾನವನ ಜಿಜ್ಞಾಸೆಯ ಫಲ ಎಂದು ಹೇಳಬಹುದು. ಮತ್ತು ನಮ್ಮ ಮತ ಧರ್ಮಗಳ ಆಂತರಿಕ ಸಾಮರಸ್ಯ ದಿಂದಲೇ ಆಗಾಗ ಈ ಬದಲಾವಣೆಗಳಿಗೆ ನಾವು ಸಮ್ಮತಿಸುತ್ತಿದ್ದೇವೆ. ನಮ್ಮ ಲ್ಲಿರುವ ಈ ದಾಕ್ಷಿಣ್ಯ ಸ್ವಭಾವದಿಂದಲೇ ನಮ್ಮ ಹಿಂದಿನವರಿಂದ ಬಂದ ಗುಣಗಳು ನಮ್ಮ ಶಿಸ್ತನ್ನು ರೂಪುಗೊಳಿಸುತ್ತವೆ. ನಾವು ಆಧ್ಯಾತ್ಮಿಕ ಶಕ್ತಿ ಯಿಂದಲೇ ಜೀವಿಸಬೇಕೆಂಬುದನ್ನು ನಮ್ಮ ಪುರಾತನ ಮತಪ್ರಚಾರಕರು ಉಪದೇಶಮಾಡಿರುವುದನ್ನು ನಾವು ಬಲ್ಲೆವು. ಬಾರ್ಕರ್‌ನು ಸೂಚಿಸುವಂತೆ ಈ ಆಧ್ಯಾತ್ಮಿಕ ಶಕ್ತಿಯು ಬಲವತ್ತರವಾದ ಆರ್ಥಿಕ ಶಕ್ತಿಯನ್ನು ಎದುರಿಸ ಬೇಕಾಯಿತು. ನೀತಿಧರ್ಮವು ಶುದ್ಧಿಗೊಳಿಸಲ್ಪಟ್ಟು, ಮತಧರ್ಮವು ದುರ್ಬ ಲಗೊಳಿಸಲ್ಪಟ್ಟಿತು. ಭಾರತೀಯರಲ್ಲಿ ಮಾನವ ಭಾವನೆಗಳು ಅತ್ಯಂತ ಕಷ್ಟಕ್ಕೆ ಸಿಕ್ಕಿದವು. ಆದ್ದರಿಂದ ನಾವು ನಮ್ಮ ಸಹೋದರರಲ್ಲಿ ಮನೋ ವಾಕ್ ಕರ್ಮಗಳಲ್ಲಿಯೂ, ಆದರ್ಶ ಮತ್ತು ವಾಸ್ತವಿಕತೆಗಳಲ್ಲಿಯೂ ಒಂದು ವಿಧವಾದ ಬಾಹಿರತೆಯನ್ನು ಕಾಣುತ್ತೇವೆ. ಪರಸ್ಪರ ವಿರುದ್ಧವಾದ ಈ ಪ್ರಮಾಣ ಸ್ವೀಕಾರಗಳ ನಾಶಕಾರಕ ಪರಿಣಾಮಗಳನ್ನು ನಾವು ಯಾವಾ ಗಲೂ ಕಾಣಲಾರೆವು. ತಮ್ಮ ರಾಜಕೀಯ ನಾಯಕರನ್ನು ವಂಚಿಸತಕ್ಕ ದ್ರೋಹಿಗಳೂ ಕೂಡಾ ನಮ್ಮ ಸಾಮಾಜಿಕ ಸ್ವರೂಪದ ತಳಹದಿಯನ್ನೇ ಭೇದಿಸತಕ್ಕ ನೈತಿಕ ಅವನತಿಯನ್ನು ಅನುಭವಿಸಲಾರರು.

ಒಂದು ಧ್ಯೇಯವು ಸಾಧ್ಯವಾಗದೆ ಇದ್ದಾಗ ಒಂದು ಆಕಾಂಕ್ಷೆಯು ನಾಶಹೊಂದಿದಾಗ ತಾತ್ಕಾಲಿಕವೂ ಅಸಾಧ್ಯವೆಂದು ತೋರುವ ಆಶಯ ಸಾಧನೆಗೆ ತಮ್ಮ ಸರ್ವ ಸಾಮರ್ಥ್ಯವನ್ನೂ ವಿನಿಯೋಗಿಸುತ್ತಾರೆ.

ಮತಪ್ರಚಾರಕರ ಕಾರ್ಯಕಲಾಪಗಳು ಪರಸ್ಪರ ಹೊಂದಿಕೆಯ ಪ್ರಬಂಧಗಳೆಂದು ಹೇಳಬಹುದು. ಪಾಶ್ಚಿಮಾತ್ಯರಲ್ಲಿ ಮತಧರ್ಮವು ಅತ್ಯುನ್ನತ ಸ್ಥಾನದಿಂದ ಕೆಳಗಿಳಿದಿದೆಯೆಂದು ನಾವು ಖಂಡಿತವಾಗಿ ಸೂಚಿಸಬಹುದು. ಮತ್ತು ಪ್ರತಿಯೊಂದು ಪೀಳಿಗೆಯಲ್ಲಿಯೂ ಪರಿಣಾಮವನ್ನುಂಟು ಮಾಡತಕ್ಕ ಶಕ್ತಿಗಳೊಂದಿಗೆ ಸೇರಿಹೋಗಿದೆ. ಆದರೆ ಇಲ್ಲಿ ನಾವು ಪಾಶ್ಚಿಮಾತ್ಯ ಸಾಮಾಜಿಕ ಅಥವಾ ರಾಜಕೀಯ ಸುಧಾರಕರು ನಮ್ಮ ಪ್ರಾರ್ಥನಾ ಮಂದಿರಗಳೊಂದಿಗೆ, ಸಂಪರ್ಕವನ್ನು ಕಳೆದುಕೊಂಡಿದ್ದಾರೆಂದೂ ಯಾವಾಗಲೂ ಮುಚ್ಚುಮರೆಯಿಲ್ಲದೆ ಹೇಳುವ ನಾಸ್ತಿಕರಾಗಿದ್ದಾರೆಂದೂ ಮತ್ತು ತಮ್ಮ ಧ್ಯೇಯ ಸಾಧನೆಗೆ ಬಹಳವಾಗಿ ಪರಿಶ್ರಮಿಸಿದ್ದಾರೆಂದೂ ಪರಿಗಣಿಸದೇ ಯಿರಲು ಸಾಧ್ಯವಿಲ್ಲ.

ಏಕೆಂದರೆ ಪೂರ್ವದಲ್ಲಿ ಅಂತಹವರನ್ನೇ ನಾವು ತ್ಯಾಗ ಮೂರ್ತಿಗಳೆಂದು ಭಾವಿಸಿದ್ದೆವು. ಇಂತಹ ಗುಂಪಿನಿಂದಲೇ ದೇಶಭಕ್ತರ ಮತ್ತು ಕ್ರಾಂತಿಕಾರರ ಸಮೂಹವು ಉದ್ಭವಿಸುತ್ತದೆ. ಭಾರತದಲ್ಲಿ ಈಗಲೂ ಕೂಡ ಬಲಯುತವಾದ ಸಂಸ್ಥೆಗಳನ್ನು ಒಳ್ಳೆಯದಕ್ಕಾಗಲೀ ಕೆಟ್ಟದ್ದಕ್ಕಾಗಲೀ ಮತಧರ್ಮವು ಸಹಕರಿಸುತ್ತದೆ.

ಇಲ್ಲಿ ಕೆಲವು ಉದಾಹರಣೆಗಳು ನಮಗೆ ನಿಜವಾಗಿಯೂ ಜ್ಞಾನ ಬೋಧಕಗಳಾಗಿರುತ್ತವೆ. ಭಾರತದಲ್ಲಿ ಆಡಳಿತಗಾರರೊಡನೆ ಸಹಕರಿಸಿ, ತಮ್ಮ ಸಹಾಯವನ್ನು ನೀಡುವುದಕ್ಕೋಸ್ಕರ ಪ್ರತಿಯೊಂದು ಅವಕಾಶವನ್ನು ಉಪಯೋಗಪಡಿಸಿಕೊಂಡು ಅದರಿಂದ ತಮ್ಮ ಸ್ವಾರ್ಥವನ್ನು ನೆರವೇರಿಸಲು ಸಿದ್ಧರಾಗಿರುವ ಕೆಲವು ಕೋಮುಗಳು, ಕೆಲವು ಸಂಘಗಳು ಮತ್ತು ಕೆಲವು ಪಂಗಡಗಳನ್ನು ವಿಶದವಾಗಿ ಹೇಳುವ ಪ್ರಯತ್ನವನ್ನು ಮಾಡಿದರೆ ಅಥವಾ ಸೂಚಿಸಿದರೆ ಅವರನ್ನು ತಿರಸ್ಕರಿಸಿದಂತಾಗುವುದು. ವಿದ್ಯಾರ್ಥಿಗಳ ಗುಂಪೇ ಎರಡನೆಯದು. ಆಶಾಪೂರಿತವಾದ ಯೋಜನೆಗೆ ಫಲದಾಯಕವಾದ ದೇಹ ಶ್ರಮವನ್ನು ಪಡಲು ಸಿದ್ಧರಾದ ಅನೇಕರನ್ನು ಆ ವಿದ್ಯಾರ್ಥಿಗಳಲ್ಲಿ ನಾವು

ಕಾಣಬಹುದು. ಆದರೆ ಸಾಮಾನ್ಯವಾಗಿ ಅವರಲ್ಲಿ ಯುವಕರಿಗೆ ಅಸದೃಶವಾದ ಸ್ವಭಾವವನ್ನು ಸೂಚಿಸತಕ್ಕ ಮತ್ತು ಅವರನ್ನು ಹಿಂದಕ್ಕೆ ಎಳೆಯುವ ಒಂದು ಶಕ್ತಿಯನ್ನು ಕಾಣಬಹುದು. ಪತ್ರಿಕೋದ್ಯೋಗಿಗಳ ಗುಂಪೇ ಮೂರನೆಯದು. ಹಿಂದಿನಿಂದಲೂ ಅವರು ಈ ಸಹಾಯಕವಾದ ಅಭಿವೃದ್ಧಿಗೆ ತಡೆಯಾಗಿರುತ್ತಾರೆ. ವಾಚಕರು ಪತ್ರಿಕೆಗಳಿಗೆ ಒಂದು ಉನ್ನತವಾದ ಧ್ಯೇಯವನ್ನೂ, ಜನರ ತರಬೇತಿಗೆ ಉನ್ನತವಾದ ಮತ್ತು ವ್ಯವಸ್ಥೆಗೊಳಿಸಲ್ಪಟ್ಟ ಮಾಧ್ಯಮವನ್ನಾಗಿ ಮಾಡಬೇಕೆಂಬ ಒತ್ತಾಯವು ಭಾರತೀಯ ಪತ್ರಿಕೋದ್ಯೋಗಿಗಳಿಂದ ಅಂಗೀಕರಿಸಲ್ಪಟ್ಟಿದೆಯೆಂದು ಡಾ|| ಡೆಸ್‌ಮಾಂಡರು ಬಿನ್ನವಿಸುತ್ತಾರೆ. ಔದ್ಯೋಗಿಕ ಮತ್ತು ಸಮರ್ಥವಾದ ಕಾಯಿದೆಯು ತನ್ನ ಕೆಲಸಕ್ಕೆ ಬಾಹ್ಯಪ್ರಭಾವಗಳನ್ನವಲಂಬಿಸಿದೆಯೆಂಬುದು ವಿಚಿತ್ರವಾಗಿದೆ. ಲಲಿತಕಲೆಗಳು ಮತ್ತು ಕೈಗಾರಿಕೆಗಳು ತಮ್ಮ ಶಕ್ತ್ಯನುಸಾರ ನಮ್ಮ ದೇಶೀಯರ ಮನೋಭಾವನೆಯನ್ನು ವ್ಯಕ್ತಪಡಿಸಲು ಸಹಕಾರಿಗಳಾಗಿವೆ.

ಮಾನಸಿಕ ಅಭ್ಯಾಸಗಳ ಈ ವಿಧವಾದ ಆಜ್ಞೆಗಳಿಂದ ಎರಡು ಪ್ರತ್ಯೇಕವಾದ ಸಾಮಾಜಿಕ ಕಾರ್ಯಗಳಲ್ಲಿ ವಿಕಸಿತವಾಗುವ ಒಂದು ಬಗೆಯ ಸಾಮಾಜಿಕ ನಡತೆಯು ರೂಪಗೊಳ್ಳುವುದು. ಮೊದಲನೆಯದಾಗಿ ಜೀವನದ ಪ್ರತಿಯೊಂದು ಮಾರ್ಗದಲ್ಲಿಯೂ, ವಸ್ತುವಿನ ಪೂರ್ವಸ್ಥಿತಿಯನ್ನು ಸ್ಥಿರವಾಗುವಂತೆ ಮಾಡುವ ಒಂದು ಪ್ರವೃತ್ತಿಯಿರುತ್ತದೆ. ಬಹುಶಃ ನಾವು ಬ್ರಿಟಿಷ ಜನಾಂಗದ ನಡೆನುಡಿ ಮತ್ತು ಸಂಪ್ರದಾಯಗಳ ಮತ್ತು ಅವರ ಇತಿಹಾಸದ ಹೆಚ್ಚಿನ ಸಂಪರ್ಕವನ್ನು ಬೆಳೆಸಿರುವುದರಿಂದ, (ಅದು ಆರ್ಥಿಕವಾಗಲೀ, ಸಾಮಾಜಿಕವಾಗಲೀ, ಲಲಿತಕಲಾ ವೈಜ್ಞಾನಿಕವಾಗಲೀ,) ಯಾವುದಾದರೂ ಒಂದು ಸಮಯದಲ್ಲಿ ಸಮಾಜವನ್ನು ಆವರಿಸಬಹುದಾದ ನಾನಾ ಶಕ್ತಿಗಳ ಪರಸ್ಪರ ಸಹಕಾರದಿಂದ ಲಭಿಸಿರುವ ಒಂದು ಶಕ್ತಿಯಿಂದ ನಾವು ಒಂದಾಗಿದ್ದೇವೆ. ಪ್ರತ್ಯಕ್ಷವಾಗಿ ನಾವು ಕಾಣುವ ಅಸಮಾನತೆಯು ನಿರರ್ಥಕವಾದ ಒಂದು ಪರಿಣಾಮವನ್ನು ಉಂಟುಮಾಡಿದೆ. ಈ ಪರಿಣಾಮವು ಆರ್ಥಿಕ ಪರಿಸ್ಥಿತಿಯ ಒಂದು ಪ್ರಗತಿಯೆಂದು ಹೇಳಬಹುದು. ಆದರೆ ಈ ಪ್ರಗತಿಯಾಗಲೀ ಪರಿಣಾಮವಾಗಲೀ ಫಲದಾಯಕವಾಗಿಲ್ಲ. ಅಥವಾ ಸಮಾಜದ ಊಹೆಗೂ ನಿಲುಕುವಂತಿಲ್ಲ. ವಾಸ್ತವವಾಗಿ ನಾವು ಸಾಮಾಜಿಕ ದೃಷ್ಟಿಯಿಂದ ಬಹಳ ಹಿಂದಿದ್ದೇವೆ.

ಈ ವಿಧವಾದ ಪ್ರೇರೇಪಣೆಗಳ ಎರಡನೇ ಫಲವೇ ಒಂದು ವಿಧವಾದ ನಿರ್ಬಂಧ ಮನೋಭಾವ. ಅದು ಕಾರ್ಮಿಕರನ್ನೂ ಸ್ವತಂತ್ರವಾಗಿ ದುಡಿಯು ವವರನ್ನೂ ಪ್ರತಿಬಂಧಿಸುತ್ತದೆ. ಅದು ತರಣರ ಮತ್ತು ವೃದ್ಧರ ಮತ್ತು ಚಿಕ್ಕ ಮತ್ತು ದೊಡ್ಡ ಸಂಸ್ಥೆಗಳ ಶಕ್ತಿಸಾಮರ್ಥ್ಯಗಳನ್ನು ಅಪೇಕ್ಷಿಸುತ್ತದೆ. ಅದು ಗಂಡಸರಲ್ಲಿಯೂ ಹೆಂಗಸರಲ್ಲಿಯೂ ತನ್ನ ಆಡಳಿತದ ಪ್ರಭಾವವನ್ನು ತೋರಬಲ್ಲದು. ಈ ವಿಧವಾದ ಮನೋಭಾವವು ಒಬ್ಬ ವ್ಯಕ್ತಿಯ ಆರಂಭದ ಜೀವನದ ಸ್ಥಿತಿಗತಿಗಳಿಂದ ಹೇಗೆ ಉದ್ಭವಿಸಿತೆಂಬುದನ್ನು ನಾವು ಮೊದಲಲ್ಲೇ ವಿವರವಾಗಿ ಹೇಳಿದ್ದೇವೆ. ನಮ್ಮ ದೇಶದಲ್ಲಿರುವ ಸಂಸ್ಥೆಗಳಲ್ಲಿಯೂ ವೈಯ ಕ್ತಿಕ ನಡತೆಗಳಲ್ಲಿಯೂ ಕಂಡುಬರುವ ಈ ಮನೋಭಾವನೆಯ ಪರಿಣಾಮ ವನ್ನು ಸಂಕ್ಷೇಪವಾಗಿ ವಿವರಿಸಬಹುದು.

ಮನಃಶಾಸ್ತ್ರದೃಷ್ಟಿಯಿಂದ ಅವಲೋಕಿಸಿದರೆ ಈ 'ವಿಚಿತ್ರ ಮನೋ ಭಾವನೆಯು ಕಾರ್ಯನಿರ್ಮಾಣ ಶಕ್ತಿಗೆ ಮೃತ್ಯುಸ್ವರೂಪವಾದ ಶಕ್ತಿ ಯೆಂದು ಹೇಳಬಹುದು. ಸರ್ವ ವಿದಿತವಾದ ಸಮಾನತೆಯ ತತ್ವವನ್ನು ಸಾಧಿಸಲು ಮಾಡಿದ ಮಾನವ ಪ್ರಯತ್ನಗಳೆಲ್ಲಾ ವ್ಯರ್ಥವಾಗುತ್ತಿವೆ. ಚಟು ವಟಿಕೆಗೆ ಅಡಚಣೆ ಉಂಟಾದಾಗಲೂ, ಚಾತುರ್ಯಕ್ಕೆ ಭಂಗ ಉಂಟಾದಾ ಗಲೂ, 'ವಿಭಾಗದ ನ್ಯಾಯ'ಕ್ಕೆ ಅವಕಾಶವಿಲ್ಲವಾಗಿ ಅದು ತನ್ನ ಅರ್ಥವನ್ನೇ ಹಾಳುಮಾಡಿಕೊಳ್ಳುವುದು. ಮಾನವನಲ್ಲಿರುವ ಸೃಷ್ಟಿಶಕ್ತಿಯ ಒಂದು ಗುಣವು, ಸ್ವಲ್ಪವೂ ತಡೆಯಿಲ್ಲದೆ ಪ್ರವಾಹದಂತೆ ಹರಿಯುವಂತಹ ಸಾಮರ್ಥ್ಯ ವನ್ನೂ, ಊಹಾಶಕ್ತಿಯನ್ನೂ, ವಿಶಾಲ ಜ್ಞಾನವನ್ನೂ ಅಪೇಕ್ಷಿಸುತ್ತದೆ. ಒಬ್ಬ ವ್ಯಕ್ತಿಯ ಪ್ರತಿಯೊಂದು ಕಾರ್ಯ ಅಥವಾ ಚಟುವಟಿಕೆಗೂ ಕ್ಲುಪ್ತ ವಾದ ಸಂಚಾರವಾಗಿ ಬಿಟ್ಟರೆ, ಅವನು ತನ್ನಲ್ಲಿರುವ ಸೃಷ್ಟಿಶಕ್ತಿಯನ್ನು ವಿಕಾಸಗೊಳಿಸಲು ಪ್ರಶಸ್ತವಾದ ಪ್ರದೇಶವನ್ನು ಪಡೆಯಲಾರನು.

ಸಾಮಾಜಿಕರೀತ್ಯಾ ನೋಡುವುದಾದರೆ ನಮ್ಮ ಮುಂದೆ ಇನ್ನೂ ಅನೇಕ ಅಪಾಯಕರವಾದ ಸಂಭವಗಳು ಕಾದಿರುವುದು ಕಾಣುತ್ತದೆ. ವಾಸ್ತ ವವಾಗಿ ನೋಡಿದರೆ ಭಾರತದಲ್ಲಿರುವ ಜಾತಿಮತಗಳ ವೈಮನಸ್ಯದ ಪ್ರಭಾ ವವೇ ಈಗ ಕಾಣುತ್ತಿದೆ. ಜಾತಿಗಳು, ಮತಗಳು, ಅದರಲ್ಲಿ ಬೇರೆ ವಿಭಾಗ ಗಳು — ಹೀಗಾಗಿ ಭಾರತ ವರ್ಷದ ಜನತೆಯೆಲ್ಲಾ ಛಿದ್ರಛಿದ್ರವಾಗಿ

ಹೋಗಿದೆ. ವಿವಾಹ, ಬಾಂಧವ್ಯ, ಮತ್ತು ಸಾಮಾಜಿಕ ಸಂಸ್ಥೆಗಳು ಮುಂತಾದ ಸಮಾರಂಭಗಳಲ್ಲಿಯೂ ಕೂಡಾ ಮತದ್ವೇಷ, ಭಿನ್ನಾಭಿಪ್ರಾಯ, ಮನಸ್ತಾಪ—ಇವುಗಳನ್ನು ಮಾತ್ರ ನಾವು ಕಾಣುತ್ತೇವೆ. ಇದರಿಂದ ನಮ್ಮ ಜೀವನವನ್ನು ವಿನಾಶಗೊಳಿಸುವ ಆರ್ಥಿಕ ದುಷ್ಪರಿಣಾಮವೊಂದು ಉದ್ಭವಿಸಬಹುದು. ನಮಗೆ ಬಳಕೆಯಲ್ಲಿರುವ ಭಾಷೆ ಮತ್ತು ಜೀವನದ ರೀತಿ ನೀತಿಗಳಲ್ಲಿ ಹೊಂದಿಕೊಳ್ಳುವ ಒಂದು ಪದ್ಧತಿಯನ್ನು ಹಿಂದಿನವರಿಂದ ಕಲಿತಿದ್ದೇವೆ. ನಮ್ಮಂತೆಯೇ ಆರ್ಥಿಕ ದೃಷ್ಟಿಯಲ್ಲಿ ಹಿಂದುಳಿದಿರುವುದರಿಂದ ನಾವು ಶಕ್ತಿಯನ್ನಾಗಲೀ, ಸಹಾಯವನ್ನಾಗಲೀ ಪಡೆಯಲಾರೆವು. ಇಡೀ ಪ್ರಪಂಚವನ್ನು ಒಟ್ಟು ಗೂಡಿಸಲು ಸಹಕಾರಿಯಾದ ಒಂದು ಮಹಾಶಕ್ತಿಯನ್ನು .ಸತ್ವರಹಿತವನ್ನಾಗಿ ಮಾಡಿದ್ದೇವೆ. ಇಂದು ನಾವು ಇದರ ಮಹತ್ವವನ್ನು ಅರಿಯದೆ ಇರಬಹುದು. ಆದರೆ ನಮ್ಮ ತಪ್ಪಿಗಾಗಿ ಪಶ್ಚಾತ್ತಾಪ ಪಡುವಂತಹ ಒಂದು ಸುದಿನ ಬರಬಹುದು.

ಕೊನೆಯದಾಗಿ ನಾವು ಈದಿನ ನಮ್ಮ ರಾಜನಿಷ್ಠೆಯನ್ನಿದಿರಿಸುವಂತಹ ಪ್ರಧಾನ ಪ್ರಭಾವಗಳನ್ನು ಕಾಣಬೇಕಾಗಿದೆ. ಇವುಗಳನ್ನು ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಒಂದು ನಿಶ್ಚಯ ಮತ್ತೊಂದು ನಿಷೇಧ.

ನಿಷೇಧವೆಂಬ ಪಂಗಡದಲ್ಲಿ ಮೂರು ಭಾಗಗಳುಂಟು. ಮೊದಲನೆಯದು—ನಮ್ಮ ಕಾರ್ಯಕಲಾಪಗಳನ್ನು ಮಿತಿಗೊಳಿಸುವ ನಿಗ್ರಹ ಶಕ್ತಿ. ಎರಡನೆಯದು—ಅನುಕೂಲವೋ ಪ್ರತಿಕೂಲವೊ ಆದ ಸಂಪ್ರದಾಯಗಳ ಬಗ್ಗೆ ಒಂದು .ವಿಧವಾದ—ಅರ್ಥವಾಗದಂತಹ—ಸಹಾನುಭೂತಿ. ಹಿಂದಿನ ಕಾಲದ ವಿಷಯದಲ್ಲಿ ನಾವಿಟ್ಟಿರುವ ಪ್ರೀತಿಯು ವಿವೇಚನಾಶಕ್ತಿಗೂ, ಸತ್ಯ ಮತ್ತು ಕರ್ತವ್ಯಗಳಿಗೂ ಅಡಚಣೆಯನ್ನು ತಂದೊಡ್ಡುತ್ತದೆ.—ಎಂಬ ಒಂದು ಅಂಶವನ್ನು ಇಲ್ಲಿ ಹೇಳಿದಂತಾಗುತ್ತದೆ. ಮೂರನೆಯದು—ತಾಟಸ್ಥ್ಯ ಮನೋಭಾವ.

ಇತಿಹಾಸ ಮತ್ತು ತಾಳ್ಮೆಯಿಂದ ಪ್ರೇರೇಪಿಸಲ್ಪಟ್ಟ ತ್ಯಾಗ ಬುದ್ಧಿ, ಮತಧರ್ಮದಿಂದ ರೂಪುಗೊಂಡಿರುವ ರಮ್ಯತೆ, ಹೊರಗಣ ಪ್ರಪಂಚದ ಸಂಪರ್ಕದಿಂದ ಬೆಳೆದು ಬಂದ ರಾಷ್ಟ್ರೀಯ ಮನೋಭಾವನೆ, ಎಂಬ ಈ ಮೂರು ಅಂಶಗಳೇ 'ನಿಶ್ಚಯ' ವೆಂಬ ಪಂಗಡಕ್ಕೆ ಸೇರಿದವು. ನಾವು ಮಾನ

ವನಲ್ಲಿರುವ ಆ ನಿಷೇಧ ಗುಣಗಳನ್ನು ನಿರ್ಮೂಲಗೊಳಿಸಿ, ಆತನ ಶ್ರೇಷ್ಠ ಗುಣ ಸಂಪತ್ತನ್ನು ವೃದ್ಧಿಗೊಳಿಸಲು ಯತ್ನಮಾಡಿದಾಗಲೇ ಮಾನವನ ನಿಜವಾದ ಅಭಿವೃದ್ಧಿ ಯು ಗೋಚರವಾಗುವುದು. (ರಮ್ಯವಾಗಿ, ದಿವ್ಯವಾಗಿ, ಮಾನವನಂತೆ ಇರುವ ಗುಣಗಳನ್ನೇ ಬೆಳಸಬೇಕು.) ವಿಶ್ವದ ಶಕ್ತಿಗಳು ನಮ್ಮಿಂದ ಈ ವಿಧವಾದ ಪ್ರಗತಿಯನ್ನೇ ಬಯಸುತ್ತವೆ. ನಾವು ಇದನ್ನು ಸಾಧಿಸದೇ ಹೋದಲ್ಲಿ, ಅವಮಾನಕರವಾದ ಬಾಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ತಾತ್ಕಾಲಿಕ ಪರಿಣಾಮದೊಂದಿಗೆ ನಾಶವನ್ನೇ ಹೊಂದೋಣ.

———

## ೯. ವಿದ್ಯಾಭ್ಯಾಸ

ಅತಿ ಮುಖ್ಯವಾದ ವಿದ್ಯಾಭ್ಯಾಸದ ವಿಷಯದಲ್ಲಿ ಸಂಪೂರ್ಣವಾದ ವಿವರಣೆ ಕೊಡುವುದೆಂದರೆ ಬಹುಶಃ ಅಸಾಧ್ಯವಲ್ಲದಿದ್ದರೂ ಬಹಳ ಕಷ್ಟಕರವಾದುದು. ನಮ್ಮ ಸಮಾಜದ ಅಂಗವಾದ ಪ್ರತಿಯೊಬ್ಬ ವ್ಯಕ್ತಿಯನ್ನು ಪರಿಶೀಲಿಸುವುದು ಅಗತ್ಯವಾಗಿದೆ. ಈ ಪರಿಶೀಲನೆಗೆ ಅತ್ಯಂತ ಮೇಧಾವಿ ಅಥವಾ ನುರಿತ ಬುದ್ಧಿಯುಳ್ಳವನ ಪಕ್ಷ ಹೊಂದಿದ ವಿಶಾಲ ಜ್ಞಾನವು ಅತ್ಯಾವಶ್ಯಕವೆಂದೇ ಹೇಳಬಹುದು. ಆದರೆ ಈ ವಿಷಯ ವಿಭಜನಾ ಕಾರ್ಯದಲ್ಲಿ ಬಲಾತ್ಕಾರವಾಗಿ ಒತ್ತಿ ಹೇಳಬೇಕಾಗಿದ್ದ ಕೆಲವು ಸಂಗತಿಗಳನ್ನು ಗಮನಕ್ಕೆ ತೆಗೆದುಕೊಳ್ಳದೆ ಗತ್ಯಂತರವಿಲ್ಲ.

ಪುನರ್ರಚಿತವಾದ ವಿಶ್ವಸಮಾಜದಲ್ಲಿ ಒಂದು ಗಣ್ಯ ಸ್ಥಾನವನ್ನು ಗಳಿಸಲು ಶಿಕ್ಷಣ ಶಾಸ್ತ್ರಜ್ಞರು ಪ್ರಯತ್ನಪಡಬೇಕು. ಮಾನವನನ್ನು ಮಾರ್ಪಡಿಸಿ ಸುಧಾರಿಸುವುದು ಮತ್ತು ಉದಾತ್ತ ತತ್ವಗಳನ್ನು ಆಚರಣೆಗೆ ತರುವುದು ಮೊದಲಾದ ಕಾರ್ಯಗಳು ಬಹಳವಾಗಿ ಇವೆ. ತತ್ವಜ್ಞಾನಿಗಳೂ, ರಾಜನೀತಿಜ್ಞರೂ ಯಾವ ವಿಷಯವನ್ನು ಭೋಧಿಸಿದ್ದಾರೆಯೋ ಅದನ್ನೇ ಒಬ್ಬ ಉಪಾಧ್ಯಾಯನು ಬೋಧಿಸಬಹುದು. ಜೇಮ್ಸಹಿಲ್ಟ ಎಂಬಾತನ ಕಾದಂಬರಿಯೊಂದರಲ್ಲಿ ಕಥಾನಾಯಕನು ಇಲಿಗಳ ಮತ್ತು ಮನುಷ್ಯರ ಸಂಗಡ ಆಟವಾಡಿದಂತೆ ಈತನು ವ್ಯಕ್ತಿಗಳನ್ನು ರೂಪುಗೊಳಿಸುವುದಕ್ಕೂ ಕೆಡಿಸುವುದಕ್ಕೂ ಸಮರ್ಥನಿದ್ದಾನೆ.

ಈಗಂತೂ ಯಾರೊಬ್ಬರಿಗೂ ವಿದ್ಯಾಭ್ಯಾಸವು ಕೇವಲ ವಿಶ್ವವಿದ್ಯಾನಿಲಯುಗಳಲ್ಲಿ ಮಾತ್ರ ದೊರೆಯುವ ಶಿಕ್ಷಣವಲ್ಲವೆಂದು ಹೇಳಬೇಕಾಗಿಲ್ಲ. ಆದರೆ ಅದು ವಾಸ್ತವವಾಗಿ, ಶಾಲೆಗಳಲ್ಲಿ, ಮನೆಗಳಲ್ಲಿ, ಕಾರ್ಖಾನೆಗಲ್ಲಿ ಸಂಪಾದಿಸಬಹುದಾದ ವ್ಯಾವಹಾರಿಕ ಜ್ಞಾನವನ್ನೂ ಅನುಭವವನ್ನೂ, ಉದಾತ್ತ ಭಾವನೆಗಳನ್ನೂ ಪಡೆದಿರಬೇಕೆಂದು ಹೇಳಬೇಕಾಗಿಲ್ಲ. ಪ್ರಕೃತ ವಿದ್ಯಾನಿಲಯುಗಳಲ್ಲಿ ಲಭಿಸುವ ಶಿಕ್ಷಣದ ವಿಷಯವಾಗಿ ಮಾತ್ರ ಚರ್ಚಿಸೋಣ.ಏಕೆಂದರೆ ಉಳಿದ ವಿಷಯುಗಳನ್ನು ಹಿಂದೆಯೇ ಚರ್ಚೆಮಾಡಿದ್ದೇವೆ.

ವಾಸ್ತವವಾಗಿ, ನಮ್ಮ ವಿದ್ಯಾಲಯುಗಳಿಂದ ದೊರೆಯುವ ಶಿಕ್ಷಣವು ನಮ್ಮನ್ನು ಒಂದು ಸರಿಯಾದ ಕ್ರಮದಲ್ಲಿ ರೂಪುಗೊಳಿಸುವಂತಿರಬೇಕು. ಅಲ್ಲದೆ ಜೀವನದಲ್ಲಿ ಒಬ್ಬ ಯೋಗ್ಯ ಪ್ರಜೆಯೆಂದು ಅನ್ನಿಸಿಕೊಳ್ಳುವಂತಾಗಬೇಕು.

ಜೀವನದ ಆರಂಭದಲ್ಲಿ ಪ್ರತಿಯೊಬ್ಬ ವ್ಯಕಿಯೂ ಶಿಕ್ಷಣ ಶಾಸ್ತ್ರಜ್ಞನ ಜವಾಬ್ದಾರಿಯಲ್ಲಿಯೇ ಬಾಳಿದವನೆಂಬ ವಿಷಯವಾಗಿ ಹೇಳುವುದಾದರೆ, ಅವರು ಮಾನವ ಜನಾಂಗಕ್ಕೇ ಅಪಘಾತವನ್ನು ಎಸಗಿದ್ದಾರಲ್ಲವೆ? ಸರ್. ಎಸ್. ರಾಧಾಕೃಷ್ಣನ್‌ರವರು ಎಷ್ಟು ಸೂಕ್ಷ್ಮವಾಗಿ, ಸ್ಪಷ್ಟವಾಗಿ ಹೇಳಿದ್ದಾರೆಂದರೆ, ಅದನ್ನು ಬೇರೆ ಯಾವ ವಿಧದಲ್ಲಿಯೂ ಹೇಳಲು ಸಾಧ್ಯವೇ ಇಲ್ಲ. ಅವರ ಮಾತುಗಳು ಹೀಗಿವೆ.

"ನಮ್ಮಲ್ಲಿರುವ ವಿವೇಚನಾಶಕ್ತಿಯನ್ನು ಹೇಗೆ ಉಪಯೋಗಿಸಬೇಕೆಂಬುದೇ ನಮಗೆ ತಿಳಿದಿಲ್ಲ. ಆದರೆ ನಾವು ಪಶುಗಳಂತೆ ನಮ್ಮಲ್ಲುಂಟಾಗುವ ಆಕಾಂಕ್ಷೆ ಮತ್ತು ದಾಹಗಳಿಗೆ ಸೋತುಬಿಡುತ್ತೇವೆ. ಆರ್ಭಟದ ಭಾಷಣಗಳೂ, ಹುಚ್ಚಾಟದ ಕೂಗುಗಳೂ—ಇವುಗಳಿಂದ ನಾವು ಮೋಸಹೋಗಿದ್ದೇವೆ. ನಮ್ಮ ಚಿಕ್ಕಂದಿನಿಂದಲೂ ನಾವು ಕೆಲವು ಸಿದ್ಧಾಂತಗಳ ಪ್ರಭಾವಕ್ಕೆ ಒಳಗಾಗಿ ಹಳೆಯ ಕಾಲದ ಕಂದಾಚಾರ ಪದ್ಧತಿಯನ್ನೇ ಅನುಸರಿಸುವಂತೆ ಅಥವಾ ಒಪ್ಪಿಕೊಳ್ಳುವಂತೆ ಪ್ರೇರೇಪಿಸಲ್ಪಟ್ಟಿದ್ದೇವೆ. ಯಾವ ಪುಸ್ತಕವನ್ನು ನೋಡಲಿ, ಯಾವ ಪತ್ರಿಕೆಯನ್ನು ನೋಡಲಿ, ಯಾವ ಸೀನಿಮಾ ನೋಡಲಿ ಇದೇ ವಿಷಯವು ಸಾಧಿಸಲ್ಪಟ್ಟಿದೆ. ನಾವು ಒಂದೇ ವಿಧವಾದ ಒಂದು ರೀತಿಗೆ ಮಾರ್ಪಟ್ಟು ಕಟ್ಟುಬಿದ್ದಿದ್ದೇವೆ. ನಮ್ಮ ಬುದ್ಧಿಶಕ್ತಿಯು ಕ್ಷೀಣವಾಗುತ್ತಿದೆ. ಸೂಕ್ತವಾದ ಮತ್ತು ನ್ಯಾಯವಾದ ತೀರ್ಪು

ಕೊಡಲು ನಮ್ಮಲ್ಲಿ ಸಾಮರ್ಥ್ಯವಿಲ್ಲ. ನಮ್ಮಲ್ಲಿದ್ದ ಸತ್ಯವೂ ಉತ್ಪಾದಕ ಶಕ್ತಿಯೂ ನಾಶವಾಗಿಬಿಟ್ಟಿದೆ. ಅಷ್ಟೇ ಅಲ್ಲ—ನಮ್ಮಲ್ಲಿ ಆತ್ಮವೂ ಇದೆ ಎಂಬುದನ್ನೂ ಸಹ ಮರೆತುಬಿಟ್ಟಿದ್ದೇವೆ. "

ರಾಜಕೀಯ ದೃಷ್ಟಿಯಿಂದ ಪರಾಧೀನತೆಯಲ್ಲಿ ತೊಳಲುತ್ತಿರುವ ಈ ನಮ್ಮ ಭರತಖಂಡದಲ್ಲಿ ವಿದ್ಯಾಭ್ಯಾಸವೆಂಬುದು ಈಗಾಗಲೇ ಶಕ್ತಿವಿಹೀನರೂ ಮೂಢರೂ ಆದ ಜನರಲ್ಲಿ ಒಂದು ವಿಧವಾದ ಗುಲಾಮಗಿರಿಯನ್ನು ಬೆಳೆಯಿಸಿ, ನೆಲೆಗೊಳಿಸುವಂತೆ ಮಾಡಲು ಇಂದಿನ ಆಡಳಿತಗಾರರಾದ ಬ್ರಿಟಿಷರ ಕೈಯ್ಯಲ್ಲಿರುವ ಒಂದು ಶಕ್ತಿಯುಳ್ಳ ಆಯುಧವಾಗಿದೆ. ಬ್ರಿಟಿಷರು ನಮ್ಮ ದೇಶದಲ್ಲಿ ವರ್ತಕರಾಗಿ ತಮ್ಮ ಆಳಿಕೆಯನ್ನು ಆರಂಭಿಸಿದರು. ಅವರಿಗೆ ವಿದ್ಯಾಭ್ಯಾಸವೆಂಬುದು ಭಾರತೀಯರನ್ನು ಗುಲಾಮಗಿರಿಗೆ ದೂಡಲು ಒಂದು ಸೊಗಸಾದ ಸಾಧನವಾಗಿದೆ. ವಿದ್ಯಾಭ್ಯಾಸವು ಪ್ರಜಾಪ್ರಭುತ್ವವಾದಿಗೆ ಹೇಗೋ ಹಾಗೆಯೇ ನಿರಂಕುಶ ಪ್ರಭುತ್ವವಾದಿಗೂ ಒಂದು ಬಲವಾದ ಆಯುಧವಾಗಿದೆ. ಮಾನವನ ಮನಸ್ಸು ಮತ್ತು ರೀತಿ ನೀತಿಗಳಲ್ಲಿ ಯಾವ ವಿಧವಾದ ಮಾನಸಿಕ ಪರಿಣಾಮವುಂಟಾಗಿದೆಯೆಂಬುದನ್ನು ಅರಿಯಲು ಯಾವುದೊಂದು ಯಂತ್ರವೂ ಬೇಕಾಗಿಲ್ಲ. ಈಗಲೂ ಸಹ ಬ್ರಿಟಿಷರು ತಾವು ಧರ್ಮಿಷ್ಟರೆಂದು ಹೇಳಿಕೊಳ್ಳುತ್ತಾರೆ. ಆದರೆ ಎಲ್ಲಾ ಧರ್ಮಿಷ್ಠರಾಜರಂತೆ ನಮ್ಮ ದೊರೆಗಳ ರಾಜನೀತಿಯು ನಮ್ಮಲ್ಲಿ ನಮ್ಮ ವ್ಯಕ್ತಿತ್ವವನ್ನೇ ನಾಶಗೊಳಿಸುವಂತಹ ಮತ್ತು ವಿಚಿತ್ರವಾದರೂ ನಾಶಕಾರಿಯಾದ ಮನೋಭಾವನೆಯನ್ನು ಹುಟ್ಟಿಸುತ್ತದೆ. ಅದು ವಿದ್ಯಾಭ್ಯಾಸದ ಅತಿ ಮುಖ್ಯವಾದ ಸಾರವನ್ನೇ ಸಂಪೂರ್ಣವಾಗಿ ನಾಶಮಾಡುತ್ತದೆ.

ನಮ್ಮ ಮಾನಸಿಕ ದಾಸ್ಯವೃತ್ತಿಯು ನಮಗೆ ಹೊಸದಾದ ಇಂಗ್ಲಿಷ್ ಭಾಷೆಯ ಸಂಪರ್ಕದಿಂದ ಆರಂಭವಾಯಿತು. ಇಂದು ಇಂಗ್ಲಿಷ್ ಭಾಷೆಯಲ್ಲಿನ ಅನುಕೂಲ್ಯಗಳ ಮಹಿಮೆಗಳನ್ನೇ ವರ್ಣಿಸುವವರು ನಮ್ಮಲ್ಲಿದ್ದಾರೆ. ಆದರೆ ಇದೇ ಪರಕೀಯ ಮಾಧ್ಯಮವೇ ನಮ್ಮನ್ನು ಮೂಕರ ಗುಂಪಾಗಿ ಮಾರ್ಪಡಿಸಲು ಕಾರಣವಾಯಿತೆಂಬುದನ್ನು ಅಲ್ಲಗಳೆಯಲಾಗದು. ಇಂದು ಭಾರತದಲ್ಲಿ ಎಂತಹ ಸಭೆಯಲ್ಲಾಗಲೀ, ಎಂತಹ ಮಿತ್ರಗೋಷ್ಠಿಯಲ್ಲಾಗಲೀ ಸಭ್ಯರೀತಿಯಲ್ಲಿ ವಿಷಯಗಳನ್ನು ವಿವರಿಸಿ ವಿಮರ್ಶೆ ಮಾಡತಕ್ಕವರು

ಅಲ್ಪ ಮಂದಿ ಮಾತ್ರ ಇದ್ದಾರೆ. ಪರಕೀಯ ಮಾಧ್ಯಮವು ಆಲೋಚನೆ ಮತ್ತು ವಿಮರ್ಶಾಜ್ಞಾನದಲ್ಲಿಯೂ ಕಾರ್ಯದಕ್ಷತೆಯಲ್ಲಿಯೂ ಮೊಟಕು ಮಾಡುವ ಬುದ್ಧಿಯನ್ನೇ ಬೆಳೆಸುತ್ತದೆ. ಸ್ವಭಾವ, ಮನೋಭಾವನೆ, ಸುಗುಣ ಗಳು ಮತ್ತು ಅನುಭವ ಇವುಗಳಿಗೆ ಸಂಬಂಧಪಟ್ಟ ಯಾವ ವಿಷಯವನ್ನಾ ದರೂ ತೆಗೆದುಕೊಂಡರೆ ತನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಮುಂದಿಡುವ ಒಂದು ಶಕ್ತಿಯಿಂದಲೇ ಆಗಬೇಕಾಗಿದೆ. ಜೀವನವು ಮಾನವನ ಮಾತುಗಳ ಸಂಗ್ರಹವೆಂದು ಭಾವಿಸಲ್ಪಟ್ಟಾಗ ಪರಕೀಯ ಮಾಧ್ಯಮದ ದುಷ್ಪರಿಣಾಮ ವನ್ನು ಸುಲಭವಾಗಿ ನೋಡಬಹುದು. ಜೀವಕಳೆಯಿಂದ ತುಂಬಿದ ಅಸಂಖ್ಯಾತ ವಾದ ಚಿಕ್ಕ ಚಿಕ್ಕ ನಕ್ಷತ್ರಗಳನ್ನುಳ್ಳ ಆಕಾಶದ ಕಾಂತಿಯು ಈ ವಿಷಪೂರಿತ ವಾದ ಆಯುಧದ ಆಳವಾದ ಮತ್ತು ಕಪ್ಪಾದ ನೆರಳಿನಿಂದ ಆವರಿಸಲ್ಪಟ್ಟು ಕಾಂತಿವಿಹೀನವಾಗಿದೆ. ಈ ವಿಧವಾದ ಆಯುಧಗಳಿಂದ ಜಯವನ್ನು ಪಡೆ ದಿಲ್ಲವಾದರೂ, ಗುಲಾಮರಾಗಿದ್ದೇವೆಂಬುದು ಖಂಡಿತವಾದ ಮಾತು. ನಾವು ವಿದ್ಯಾಭ್ಯಾಸವನ್ನೂ, ಧೈರ್ಯ, ಕಾರ್ಯತತ್ಪರತೆ ಮುಂತಾದ ಗುಣಗಳನ್ನೂ ಎಲ್ಲಿ ಕಲಿಯಬಹುದೋ ಅಲ್ಲಿ ಅವುಗಳು ಮಾಯವಾಗಿ ನಿರ್ಜೀವವೇ ಕಾಣ ಬರುತ್ತದೆ. ಚೇತನಗೊಳಿಸುವಂತಹ ವಿದ್ಯಾಶಾಲೆಗಳ ಪಾಡೂ ಇದೇ ಆಗಿದೆ.

ಇನ್ನು ನಾವು ಸಾಹಿತ್ಯ, ವಿದ್ಯಾಭ್ಯಾಸ ಮತ್ತು ಸಾಮಾಜಿಕ ನಡೆವಳಿಕೆ ಗಳಿಗೆ ಇರುವ ಮುಖ್ಯವಾದ ಸಂಬಂಧವನ್ನು ಗಮನಿಸಬೇಕಾಗಿದೆ. ವಿದ್ಯಾ ವಂತರ ಮೇಲೂ ಅವಿದ್ಯಾವಂತರ ಮೇಲೂ ಸಾಹಿತ್ಯವು ಎಂತಹ ಪ್ರಭಾವ ವನ್ನುಂಟುಮಾಡಿದೆಯೆಂಬುದನ್ನು ಗೊತ್ತುಹಿಡಿಯುವುದು ಅಷ್ಟೇನೂ ಕಷ್ಟ ವಲ್ಲ. ಮಾರ್ಕ್ಸ್ ಮತ್ತು ಎಂಜಲ್ಸ್ ಇವರು ಬರೆದಿರುವ ಸಾಹಿತ್ಯ ರಾಶಿಯೇ ಇದಕ್ಕೆ ಆಧಾರವಾಗಿದೆ. ಅಮೇರಿಕದ ಪೇನ್ ಮತ್ತು ವೈಟ್ ಮಾನ್‌ರವರೂ, ಫ್ರಾನ್ಸಿನ ವಾಲ್ಟೇರ್ ಮತ್ತು ರೋಸೋರವರೂ ಪುರೋ ಗಾಮಿಗಳೂ ಆಗಿರುತ್ತಾರೆ. ಸಾಮಾಜಿಕ ಮತ್ತು ರಾಜಕೀಯ ಇತಿಹಾಸ ಗಳಲ್ಲಿ ಕಂಡುಬರುವ ಪ್ರತಿಯೊಂದು ಯುಗದಲ್ಲಿಯೂ ಇವರ ಸ್ಫೂರ್ತಿದಾ ಯಕವಾದ ಮಾತುಗಳು ಗುರುತು ಮಾಡಲ್ಪಟ್ಟಿವೆ. ಅವರ ಸಂಪರ್ಕವನ್ನು ಪಡೆಯುವ ಜನರ ಮನೋಭಾವನೆಗಳನ್ನೂ, ಆಶೆ ಮತ್ತು ಕೊರತೆಗಳನ್ನೂ ಮುಂದಿಡುವುದು ಅವರ ಕರ್ತವ್ಯವಲ್ಲ. ಅವರು ಬರೆದ ಸಾಹಿತ್ಯವ ತಾವು

ಜೀವಂತರಾಗಿದ್ದ ಕಾಲದಲ್ಲಿ ಬಾಳಿದ ಜನಾಂಗಕ್ಕೆ ಲಭಿಸಲಿಲ್ಲ. ತನ್ನ ಸಮಕಾಲೀನರಾದ ಕವಿಗಳಿಂದಲೂ, ಕಾಲಜ್ಞಾನಿಗಳಿಂದಲೂ ಬೋಧಿಸಲ್ಪಟ್ಟ ಮತ್ತು ಸ್ಫೂರ್ತಿಗೊಳಿಸಲ್ಪಟ್ಟ ಒಂದು ಕಲ್ಪನಾವಾದವನ್ನು ವಾಸ್ತವಿಕತೆಗೆ ತರಬೇಕೆಂಬ ಒಂದು ಉತ್ಸಾಹವು ಮನುಷ್ಯನಲ್ಲಿದೆ. ಇದರ ಪ್ರಭಾವವು ಪ್ರಗತಿದಾಯಕವಾದ ಮಾರ್ಪಾಡಿಗೆ ಒಂದು ಅವಕಾಶವನ್ನು ಕಲ್ಪಿಸಿದೆ. ಇದೇ ಸಾಹಿತ್ಯದ ಮಹಾಸಂದೇಶ. ಕಳೆದ ಶತಮಾನದಲ್ಲಿ ನಾವು ಪಡೆದ ಅಕ್ರಮ ಶಿಕ್ಷಣದ ಫಲವಾಗಿ ಈ ಪರಿಣಾಮವೂ ಪ್ರಯೋಜನಕಾರಿಯಾಗಿಲ್ಲವೆಂಬುದು ನಮ್ಮ ದೌರ್ಭಾಗ್ಯವೇ ಸರಿ. ಕವೀಂದ್ರ ರವೀಂದ್ರರ ಅಥವಾ ಮಹಾತ್ಮಾ ಗಾಂಧೀಜೀಯವರ ಸ್ಫೂರ್ತಿದಾಯಕವಾದ ಇಂದಿನ ಸಾಹಿತ್ಯವಾಗಲೀ ಅದಕ್ಕಿಂಲೂ, ಸ್ವಲ್ಪ ಹಿಂದಿನ ಸ್ವಾಮಿ ವಿವೇಕಾನಂದರ ಧಾರ್ಮಿಕ ಪ್ರಚಾರವಾಗಲೀ ಅತ್ಯಂತ ನಿರ್ಬಲ ಹೃದಯಗಳನ್ನೂ ಕೂಡಾ ಬಲಪಡಿಸುವಂತಹ ಸಾಮರ್ಥ್ಯವುಳ್ಳದ್ದಾದರೂ ಹೆಚ್ಚು ಫಲಕಾರಿಯಾಗಿಲ್ಲ.

ಇನ್ನೊಂದು ಮುಖ್ಯ ವಿಷಯವೆಂದರೆ—ನಮ್ಮ ದೇಶದಲ್ಲಿ ಅಸಂಖ್ಯಾಕ ಭಾಷೆಗಳಿರುವುದೇ ಆಗಿದೆ. ನಮ್ಮ ಭರತ ಖಂಡದಷ್ಟು ವಿಸ್ತಾರವಾದ ದೇಶದಲ್ಲಿ ಇಷ್ಟು ಭಾಷೆಗಳಿರುವುದು ಅವಶ್ಯಕವೇ ಆಗಿದೆಯೆಂದು ವಾದಿಸಬಹುದು; ಈ ವಾದವನ್ನು ನಾವು ಒಪ್ಪಿಕೊಂಡರೂ ಕೂಡ ಈ ಅಪಾಯಕರ ಸ್ಥಿತಿಯ ದುಷ್ಪರಿಣಾಮಗಳನ್ನು ನಾವು ನಿರ್ಲಕ್ಷಿಸಲಾಗದು. ಆರ್ಥಿಕ ಪರಿಸ್ಥಿತಿಗಳು ಈ ನಮ್ಮ ದೇಶವನ್ನು ಇನ್ನಷ್ಟು ಉಲ್ಬಣಾವಸ್ಥೆಗೆ ತರುವುವು. ಇದನ್ನು ನಿರಾಕರಣೆಯ ದುಷ್ಟ ಸಾಧನೆಗಳನ್ನು ಪ್ರಚೋದಿಸುವ ಒಂದು ವಿಚಿತ್ರ ವ್ಯೂಹವೆಂದು ಹೇಳಬಹುದು. ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿಯೂ ಶೈಥಿಲ್ಯದ ಅರಿವನ್ನುಂಟುಮಾಡುವಂತಹ ನಿಸ್ಸಂಗ ಜೀವನಕ್ಕೆ ಅವನನ್ನು ಬಂಧಿಸುತ್ತದೆ. ನಮ್ಮ ದೇಶದಲ್ಲಿ ಅನೇಕ ಭಾಷೆಗಳಿರುವುದರಿಂದ ಒಂದು ದೊಡ್ಡ ಅಡಚಣೆ ಸಂಭವಿಸಿದೆ. ಅದೇನಂದರೆ:—ನಮ್ಮ ದೇಶದ ಸ್ವಾಭಾವಿಕ ಲಕ್ಷಣಗಳನ್ನು ಹೊರಗೆಡಹತಕ್ಕ ನಾನಾರೀತಿಯ ಮಾರ್ಗಗಳನ್ನು ಸಂಗ್ರಹಿಸಲು ಸ್ಪಷ್ಟವಾದ ಮತ್ತು ಸರ್ವವೇದ್ಯವಾದ ಮಾಧ್ಯಮವನ್ನು ಸೃಷ್ಟಿ ಮಾಡಲು ಸಾಧ್ಯವಾಗಿಲ್ಲ. ಪ್ರಕಾಶಮಾನವಾದ ಮತ್ತು ಮನೋಹರವಾದ ಉದ್ಯಾನವನದಲ್ಲಿ ಮೃದುವಾದ, ಸುಗಂಧಮಯವಾದ ನಾನಾ ಬಣ್ಣ

ಗಳಿಂದ ಕೂಡಿದ ಸಾವಿರಾರು ಹೂಗಳು ಇರುವಂತೆ ನಮ್ಮ ದೇಶದಲ್ಲಿಯೂ ಕೂಡ ನಾನಾ ವಿಧವಾದ ರೀತಿನೀತಿಗಳು ಕಂಡು ಬರುತ್ತವೆ. ಆದರೆ ಇದೇ ಸಮಯದಲ್ಲಿ ಈ ವಿಧವಾದ ಸೊಗಸಿನ ಸೃಷ್ಟಿಗಳನ್ನು ಸಂಗ್ರಹಿಸಲು ಒಂದು ಅಂದವಾಗಿ ಕೆತ್ತಲ್ಪಟ್ಟ ವಿಶಾಲವಾಗಿಯೂ ಮನೋಹರವಾಗಿಯೂ ಇರುವ ಪುಷ್ಪಪಾತ್ರೆಯು ಅತ್ಯಗತ್ಯವೆಂದು ನಾವು ಮನಗಾಣಬೇಕಾಗಿದೆ. ಅಲ್ಲಿ ಅನುಕೂಲ್ಯ, ಕಲೆ ಮತ್ತು ಸೌಂದರ್ಯ ಇವುಗಳನ್ನು ಹೇರಳವಾಗಿ ಕಾಣಬಹುದು. ನಮ್ಮ ಜೀವನದ ಪ್ರತಿಯೊಂದು ನಾಳದಲ್ಲಿಯೂ ಎಲ್ಲಾ ಪದಾರ್ಥಗಳಿಗೂ ಇರುವ ಅಗಾಧವಾದ ದ್ವೇಷದ ದೆಶೆಯಿಂದ ಇನ್ನೂ ನಾವು ಏನನ್ನೂ ಸಾಧಿಸಲು ಸಾಧ್ಯವಾಗಿಲ್ಲ. ನಮ್ಮ ಭಾಷೆ ಮತ್ತು ಸಾಹಿತ್ಯ ಮತ್ತು ಭಾಷಣಗಳೂ ಮತ್ತು ಗ್ರಂಥಗಳೂ ಅಲ್ಲದೆ ಇದೇ ತೆರನಾದ ಸತ್ಯಜ್ಞಾನಾನ್ವೇಷಣವನ್ನು ಪ್ರತಿಬಿಂಬಿಸತಕ್ಕ ಮಾನವ ಬುದ್ಧಿಶಕ್ತಿಯು ನಾನಾ ರೂಪಗಳು ಅವನ ಅಂತ್ಯಗುರಿಗೆ ಸಹಾಯಕವಾಗುವ ಪಕ್ಷದಲ್ಲಿ, ಪ್ರಪಂಚದ ಸಹಸ್ರಾರು ಭಾಷೆಗಳಿಗೂ ಆಶ್ರಯವನ್ನು ನೀಡತಕ್ಕ ಒಂದು ಸುವರ್ಣ ಪುಷ್ಪಪಾತ್ರೆಯು ನಮಗೆ ಅತ್ಯಾವಶ್ಯಕವೆಂದು ಕಟ್ಟ ಖಂಡಿತವಾಗಿ ಹೇಳಬಹುದು. ಇಂದೋ ನಾಳೆಯೋ ಈ ಸಮಸ್ಯೆಯಲ್ಲಿ ನಮಗಿರುವ ಅಪನಂಬಿಕೆಯನ್ನು ಹೊರಗೆಡಹ ಬೇಕಾಗಬಹುದು. ಈ ಪ್ರಯತ್ನದಲ್ಲಿ ನಮ್ಮ ಭಾರತವು ಮಾರ್ಗದರ್ಶಕವಾಗಬಲ್ಲದು. ನಮ್ಮ ಬಂಧವಿಮೋಚನಕ್ಕೆ ಇದೊಂದೇ ರಾಜಮಾರ್ಗ. ಪ್ರಪಂಚದ ಭಾಷೆಯು ಸಮಂಜಸವಾದ ಐಕ್ಯತೆಯಿಂದ ಕೂಡಿದ ಮಾನವ ಭಾವನೆಗಳನ್ನು ಪ್ರಕಾಶಿಸತಕ್ಕದ್ದಾಗಿ ಇರುತ್ತದೆ ಎಂದು ನಾವು ಧಾರಳವಾಗಿ ಹೇಳಬಹುದು. ಅತ್ಯಂತಸುಂದರವಾದ ಪರಮ ಪವಿತ್ರವಾದ ಮತ್ತು ಚಾತುರ್ಯದಿಂದ ಒಟ್ಟುಗೂಡಿಸಲ್ಪಟ್ಟ ಎಲ್ಲಾ ಭಾಷೆಗಳ ಸಾರದಿಂದ ಸೃಷ್ಟಿಸಲ್ಪಡುತ್ತದೆ. ಮಾನವನ ಚಾಕಚಕ್ಯವು ಇದನ್ನು ಮಾಡದಿದ್ದರೆ ಪ್ರಾಕೃತಿಕ ಶಕ್ತಿಗಳು ಮಾನವೀಯತೆಯ ಮೇಲೆ ಅದನ್ನು ಬಲಾತ್ಕರಿಸುತ್ತವೆ. ಆದುದರಿಂದ ನಾವು ಇಲ್ಲಿಯೇ ಈಗಲೇ ಶ್ರಮ ಪಟ್ಟರೆ ಉತ್ತಮವಲ್ಲವೆ?

ಪರಕೀಯ ಶಿಕ್ಷಣವನ್ನು ಪಡೆದ ಮಾನವರ ಕೆಲಸವನ್ನು (ಅದು ಪ್ರಯೋಜನ ಕಾರಿಯಾಗಲಿ ಆಗದಿರಲಿ) ಕಟ್ಟಕಡೆ ವಿಮರ್ಶಿಸಬೇಕಾಗು

ತ್ತದೆ. ಭಾರತದಲ್ಲಿಯೂ ಕೂಡ ಪದವಿಯನ್ನು ಪಡೆಯಲು ಶ್ರಮಿಸತಕ್ಕ ವನೂ ಕೂಡ ಜಂಭಗಾರನಾಗಿದ್ದಾನೆ. ಪ್ರಪಂಚದ ಜವಾಬ್ದಾರಿಗಳು ಮತ್ತು ವಾಸ್ತವಿಕತೆಗಳಿಂದ ಬೇರೆಯಾದಂತಹ ಒಂದು ಪ್ರಪಂಚದಲ್ಲಿ ಅವನು ವಾಸಿಸುತ್ತಾನೆ. ಅವನದು ಕೇವಲ ಒಂದು ಸ್ವಪ್ನಪ್ರಪಂಚ. ಅದು ಶಾಂತಿ ಕ್ರಾಂತಿಗಳಿಂದಲೂ ಆಟಹರಟೆಗಳಿಂದಲೂ ಕೂಡಿದೆ. ಆರ್ಥಿಕಾನು ಕೂಲ್ಯವನ್ನು ಸಾಧಿಸತಕ್ಕ ಪದವಿಗಳನ್ನು ಪಡೆಯಲು ಮಾತ್ರ ಅವನು ಆಶಿ ಸುತ್ತಾನೆಂಬುದನ್ನು ನಾವು ಆಗಲೇ ಗಮನಿಸಿದ್ದೇವೆ. ಭಾರತದಲ್ಲಿ ವಿದ್ಯಾ ಭ್ಯಾಸವು ಭಾರತೀಯ ಸಂಸ್ಕೃತಿಯನ್ನು ವ್ಯಕ್ತಪಡಿಸುತ್ತದೆ. ಅಥವಾ ನಮ್ಮ ಕಲ್ಪನಾ ಶಕ್ತಿಗಳ-ಪ್ರಗತಿಗೆ ಅದು ಮೂಲಾಧಾರವಾಗಿದೆ—ಎಂದು ಹೇಳಿ ದರೆ ಅದು ಅಪಹಾಸ್ಯವಾದೀತು. ಪೂರ್ವಾಚಾರ ಪದ್ಧತಿಯ ಪ್ರಭಾವ ದಿಂದಲೂ ನಮ್ಮಲ್ಲಿ ಇರಬಹುದಾದ ಅಂತರ್ನಿಗೂಢವಾದ ಕಲ್ಪನಾಶಕ್ತಿಯ ಸಾಮಾಜಿಕ ಸ್ಫೂರ್ತಿಯು ನಮ್ಮ ವಿಶ್ವವಿದ್ಯಾನಿಲಯದ ಶಿಕ್ಷಣದಿಂದ ರೂಪು ಗೆಡಿಸಲ್ಪಟ್ಟಿದೆ. ಪರದೇಶಗಳಲ್ಲಿ ಶಿಕ್ಷಣ ಹೊಂದಿದ ಭಾರತೀಯನಿಗೆ ಇವೆ ಲ್ಲವೂ ಹೆಚ್ಚಾಗಿ ಅನ್ವಯಿಸುತ್ತವೆ. ಆಡಳಿತಗಾರರು ಇವನಲ್ಲಿಯೇ ತಮ್ಮ ಆಶೆಯನ್ನೆಲ್ಲಾ ಇಟ್ಟಿರುತ್ತಾರೆ. ಆದರೆ ಇದು ನಾಚಿಕೆಗೇಡು. ಇವನ ಸಹೋದರರು ಇವನಲ್ಲಿ ನಂಬಿಕೆ ಇಟ್ಟಿದ್ದರು; ಆದರೆ ಅವರನ್ನೆಲ್ಲಾ ಕ್ರೌರ್ಯ ದಿಂದ ಮೋಸಗೊಳಿಸಿ, ತುಚ್ಛವಾಗಿ ನಿರ್ಲಕ್ಷಿಸಿರುತ್ತಾನೆ. ಇಂಡಿಯನ್ ಸಿವಿಲ್ ಸರ್ವಿಸ್‌ನ ನಾನಾ ಮುಖಗಳನ್ನು ನಾವು ಇಲ್ಲಿ ಪ್ರಸ್ತಾಪಿಸುವುದು ಅಪ್ರ ಕೃತ. ಇದಂತೂ ನಿರ್ದಯಾತ್ಮಕ ಹೃದಯಗಳಿಂದಲೂ, ದುರಾಶೆಗಳಿಂದಲೂ ಕೂಡಿದ ದುರ್ಬಲ ಮನಸ್ಕರಾದ ಗುಲಾಮರ ಸ್ಮಾರಕನಿಲಯ. ಅವರಿಗೆ ಬೇಕಾದಷ್ಟು ವಿರಾಮವೂ, ಅನಂತವಾದ ಸೇವಾಮಾರ್ಗಗಳೂ ಇವೆ. ಅಲ್ಲದೆ ಜನಸಾಮಾನ್ಯರ ಪುರೋಭಿವೃದ್ಧಿಗೆ ಪ್ರಯೋಜನಕಾರಿಯಾದ ಯಂತ್ರೋಪಕರಣಗಳು ಅವರ ಅಧೀನದಲ್ಲಿವೆ. ಆದರೂ ಸಹ ಅವರು ಅವು ಗಳನ್ನು ಪ್ರಜೆಗಳ ಪ್ರಯೋಜನಕ್ಕಾಗಿ ಸ್ವಲ್ಪವಾದರೂ ವಿನಿಯೋಗಿ ಸುತ್ತಿಲ್ಲ.

ವೈಯಕ್ತಿಕ ರೀತಿಯ ಜೀವನಕ್ಕೆ ನಮಗಿರುವ ಅಭಿಲಾಷೆಯು ಔದ್ಯೋಗಿಕ ಶಿಕ್ಷಣದಲ್ಲಿ ಅಪನಂಬಿಕೆಯನ್ನುಂಟುಮಾಡಿದೆ. ಮನುಷ್ಯ

ನನ್ನು ವೈಯಕ್ತಿಕ ಸಂಪೂರ್ಣತೆಯಲ್ಲಿ ಅಭಿವೃದ್ಧಿಗೊಳಿಸಿ, ಯಂತ್ರೋಪ ಕರಣಗಳನ್ನು ಮಾನವನ ಉಪಯೋಗವನ್ನು ನಿರ್ಲಕ್ಷಿಸದಂತೆ ಮಾಡುವುದೇ ಶಿಕ್ಷಣದ ಪರಮಧ್ಯೇಯ. ಪ್ರತಿಯೊಬ್ಬನ ಜೀವನದ ಅಂತಸ್ತನ್ನು ಉತ್ತಮ ಗೊಳಿಸಬೇಕಾದುದು ನಮ್ಮ ಪ್ರಥಮ ಕರ್ತವ್ಯ. ಔದ್ಯೋಗಿಕ ಶಿಕ್ಷಣವೂ, ಕೈಗಾರಿಕಾಜೀವನವೂ ನಮಗೆ ಅತ್ಯಾವಶ್ಯಕವಾಗಿದೆ. ಪ್ರಕೃತಿ ದೇವಿಯ ವರಗಳಂತಿರುವ ಮಾನವನ ಏಳಿಗೆಯ ವಿವಿಧ ಸಾಧನೆಗಳ ಸಮತೂಕವೇ ಮಾನವನ ಬಾಳ್ವಿಕೆಯೆಂದು ಹೇಳಬಹುದು. ಪ್ರಾಯಶಃ ಅದು ಮನುಷ್ಯ ಪ್ರಯತ್ನದ ಫಲಗಳಾಗಿರಬಹುದು. ಸ್ವಾಭಾವಿಕವಾಗಿ ತುಚ್ಛವಾದ ಕೆಲವು ಮನಃಸ್ಫೂರ್ತಿಗಳನ್ನು ಬಿಟ್ಟು ಬೇರೆ ಯಾವ ವೈಯಕ್ತಿಕ ಅಥವಾ ಸಾಮಾ ಜಿಕ ಸ್ವಭಾವವನ್ನೂ ತ್ಯಜಿಸಲಾಗದು.

ಭಾರತದಲ್ಲಿ ವಿದ್ಯಾಭ್ಯಾಸವು ಕೇವಲ ಶ್ರೀಮಂತರಿಗೆಂದೇ ಭಾವಿಸಲ್ಪ ಟ್ಟಿದೆ. ಅದು ಕೇವಲ ಅಲ್ಪಸಂಖ್ಯಾತರ ಹಕ್ಕಾಗಿದೆ. ಅವರಲ್ಲಿಯೂ ಕೂಡ ಪ್ರತಿಯೊಬ್ಬನೂ ಗುಮಾಸ್ತಗಿರಿಯ ಕೆಲಸಕ್ಕೆ ಅರ್ಹನಾಗಿದ್ದಾನೆಂಬ ಹಳೇ ಕಂದಾಚಾರದ ಭಾವನೆ ಮೂಡಿಬಿಟ್ಟಿದೆ. ಪುರಾತನ ಕಾಲದ ದಾಸ್ಯಭಾವ ನೆಯು ಪ್ರತಿಚ್ಛಂದವಾಗಿದೆ. ಏಕೆಂದರೆ ಅದು ಕೃತಕವಾಗಿಯೂ, ಗ್ರಂಥಾ ಧೀನವಾಗಿಯೂ ಮತ್ತು ಆಡಂಬರ ಸಹಿತವಾಗಿಯೂ ಇದೆ. ಶಿಕ್ಷಣವೆಂದರೆ ಮನಃಸ್ಫೂರ್ತಿಯನ್ನುಂಟುಮಾಡತಕ್ಕ ತರಬೇತಾಗಿರಬೇಕು. ಅದು ಜನ ಸಾಮಾನ್ಯದ ಹಿತಚಿಂತನೆಗೆ ಉಪಯೋಗವಾಗತಕ್ಕ ಎಲ್ಲಾ ವೈಯಕ್ತಿಕ ಸಾಮರ್ಥ್ಯಗಳ ಪ್ರೇರೇಪಣೆಯ ಫಲವಾಗಿದೆ. ಅದೇ ಜಗತ್ತಿನ ಪ್ರಜೆಗೆ ದೊರೆಯಬೇಕಾದ ನಿಜವಾದ ಶಿಕ್ಷಣ.

---

## ೧೦. ಭವಿಷ್ಯದ ಭರವಸೆ

ಹಿಂದಿನ ಶತಮಾನದಲ್ಲಿ ಸಾಂಸ್ಕೃತಿಕ ಮತ್ತು ಬುದ್ಧಿಸಂಬಂಧವಾದ ಕ್ರಾಂತಿಯನ್ನುಂಟುಮಾಡಿದ ಸ್ವಾತಂತ್ರ್ಯಶಕ್ತಿಗೆ ಈ ದೇಶದಲ್ಲಿ ತೋರಿ ಸಲ್ಪಟ್ಟ ಔದಾಸೀನ್ಯವೇ ಯುವಕ ಚಳುವಳಿಯ ಅಸ್ತಿಭಾರ—ಎಂಬ ವಿಷ ಯವನ್ನು ಈ ಸಣ್ಣಪುಸ್ತಕದಲ್ಲಿ ಪ್ರತಿಪಾದಿಸಿದೆ. ಆಧುನಿಕ ವೃತ್ತಿಯು

ಸಾಮಾಜಿಕ ಸಂಸ್ಥೆಗೆ, ಮಾನವನ ಕಲ್ಪನಾಸಾಮರ್ಥ್ಯಕ್ಕೆ ಶೃಂಖಲೆಗಳನ್ನು ತೊಡಿಸಿದ ಪುರಾತನ ಕಾಲದ (ಪ್ರಚೋದನಾ) ಶಕ್ತಿಯನ್ನು ನಿರ್ಲಕ್ಷಿಸದೆ ತೋರ್ಪಡಿಸತಕ್ಕ ಒಂಟಿಯಾಗಿರುಹಿಕೆಯನ್ನು ನಾವು ಚೆನ್ನಾಗಿ ಅರಿತಿದ್ದೇವೆ.

ಭಾರತೀಯ ರಾಜಕೀಯ ಜೀವನದಲ್ಲಿ ಆಸಕ್ತರಾಗಿರುವವರಿಗೆ ಈ ವಿವರಣೆಯು ಸಮ್ಮತವಾಗುವುದೋ ಇಲ್ಲವೋ ನಾನು ಹೇಳಲಾರೆ. ಆದರೆ ನಾನು ಸೂಚಿಸಿರತಕ್ಕ ಕೆಲವು ಶಕ್ತಿಯನ್ನು ಗಮನಿಸಬೇಕೆಂಬುದೇ ನನ್ನ ದೃಢವಾದ ನಂಬಿಕೆ. ಆಧುನಿಕ ನಾಗರಿಕತೆಯ ಕ್ಲಿಷ್ಟ ಸಮಸ್ಯೆಗಳನ್ನು ಚೆನ್ನಾಗಿ ಅರಿತ ಮೇಲೆಯೇ ನವೀನ ಸಾಮಾಜಿಕ ತಳಹದಿಯನ್ನು ಭದ್ರವಾಗಿ ಕಟ್ಟಬಹುದು. ಈ ದೇಶದಲ್ಲಿ ಯುವಕ ಚಳುವಳಿಯ ನಾಯಕತ್ವವು ಸಂಕುಚಿತ ಮನೋಭಾವವನ್ನೂ, ಸೋಲುವ ಸ್ವಭಾವವನ್ನೂ ಉಳ್ಳವರಲ್ಲಿ ನೆಲಸಿದೆ. ಅವರು ಸಮತಾವಾದಿಗಳಾದರೂ ಅಥವಾ ಗಾಂಧೀ ಅನುಯಾಯಿಗಳಾದರೂ ದೈಹಿಕಾತ್ಮಕ ಮಾನಸಿಕ ಚಿಕಿತ್ಸಾಲಯಗಳಲ್ಲಿ ರೋಗಿಗಳಾಗಿರಲು ಅರ್ಹರಾಗಿರುತ್ತಾರೆ. ಈ ಎರಡು ರೀತಿಗಳ ಉತ್ತಮವಾದ ಧ್ಯೇಯಗಳು ರಾಜಕೀಯ ವಿಗ್ರಹಾರಾಧನೆಗೆ ಅಭಿಮುಖವಾಗಿ ಓಡುತ್ತಿರುವ ಆಧುನಿಕ ಹುಚ್ಚು ನುಗ್ಗಾಟವನ್ನು ತಡೆಗಟ್ಟುತ್ತವೆ. ಮತ್ತು ಸ್ವತಂತ್ರವಾದ ವೈಯಕ್ತಿಕ ಕ್ರಿಯಾಶಕ್ತಿಯನ್ನು ಹುರಿದುಂಬಿಸುತ್ತವೆ. ಆದರೆ ಈ ಎರಡು ಗುಂಪುಗಳೂ ಒಂದು ವಿಧವಾದ ಪರಾಧೀನತೆಯನ್ನೂ ಅಜ್ಞಾನವನ್ನೂ ತೋರಿಸುತ್ತವೆಯಲ್ಲಾ—ಎಂಬುದೇ ವಿಷಾದಕರವಾದ ವಿಷಯ.

ನಮಗೆ ಅತ್ಯಾವಶ್ಯಕವಾಗಿ ಈಗ ಬೇಕಾದುದು ಸರ್ವತೋಮುಖವಾದ ಸಾಹಸದಿಂದ ಕೂಡಿದ ನಾಯಕತ್ವ. ಸಾಧ್ಯವಾದಮಟ್ಟಿಗೂ ಪ್ರತಿಯೊಬ್ಬ ಯುವಕನೂ ತನ್ನ ನಡತೆಯನ್ನು ತಿದ್ದಿಕೊಂಡು ವೃದ್ಧಿಗೊಳಿಸಬೇಕು. ಅಜ್ಞಾನವನ್ನೂ ಔದಾಸೀನ್ಯವನ್ನೂ ಮತ್ತು ನಮ್ಮ ರಾಜಕೀಯ ಮತ್ತು ಮತೀಯ ವಿಷಯಗಳಲ್ಲಿ ನಿಪುಣರಾದವರ ಅಸಂಬದ್ಧವಾದ, ಆದರ್ಶರಹಿತವಾದ ಉಪದೇಶಗಳನ್ನೂ ತೊರೆಯಲೇಬೇಕಾಗುತ್ತದೆ. ನಾವು ನಿಜವಾದ ಸ್ವಾತಂತ್ರ್ಯಕ್ಕೆ ಹೆಚ್ಚು ಆಸಕ್ತಿಯನ್ನು ಬೆಳಸಲೇಬೇಕಾಗುವುದು. ನಮ್ಮಲ್ಲಿ ಸೇವೆಗೂ ಆದರ್ಶಕ್ಕೂ ಬೇಕಾದ ಉತ್ಸಾಹವು ಯಥೇಚ್ಛವಾಗಿದೆ. ಆದರೆ

ನಮಗೆ ಅತ್ಯಾವಶ್ಯಕವಾಗಿಬೇಕಾದುದು ಸಂಚಾಲಕ ಶಕ್ತಿ ಮತ್ತು ಸುವ್ಯವಸ್ಥಿತವಾದ ಸಂಸ್ಥೆ.

ದೀರ್ಘವಾದ ಮತ್ತು ಕ್ಲಿಷ್ಟವಾದ ವಿವರಗಳಿಂದ ಕೂಡಿದ ಕಾರ್ಯಕ್ರಮದ ಪಟ್ಟಿಯನ್ನು ತಯಾರಿಸುವುದು ಬಹಳ ಸುಲಭ. ಆದರೆ ಈಗ ನಮ್ಮ ಕರ್ತವ್ಯವು ಅದಲ್ಲ. ಅಲ್ಲದೆ ಆ ಮಾರ್ಗವು ನಮಗೆ ಯಾವಾಗಲೂ ಸಹಾಯವನ್ನು ನೀಡಲಾರದು.

ಈ ವಿಷಯವನ್ನು ಎರಡು ವಿಧವಾಗಿ ವಿಂಗಡಿಸಬಹುದು. ಮಾನವನ ಸಾಮರ್ಥ್ಯದ ಗುಣಾವಗುಣಗಳನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸತಕ್ಕ ವಿಮರ್ಶಾತ್ಮಕ ದೃಷ್ಟಿಯೇ ಮೊದಲನೆಯದು. ಇದು, ವಿರುದ್ಧವಾದ ಸ್ವಭಾವಗಳನ್ನೂ ಅವ್ಯವಸ್ಥಿತ ಬುದ್ಧಿಯನ್ನೂ ದುರ್ಬಲ ಮನೋವೃತ್ತಿಗಳನ್ನೂ ಅಳಿಸಲು ಸಹಾಯ ಮಾಡುತ್ತದೆ. ಆದ್ದರಿಂದ ಈ ರೀತಿ ತಾರ್ಕಿಕ ನಿಯಮಗಳನುಸಾರವಾಗಿ ಹೇಳಿದರೆ—ನಾವು ಅತ್ಯಂತ ಪ್ರಕಾಶಮಾನವಾದ ಮಾನವನ ಮಹತ್ವವನ್ನು ತಿಳಿದುಕೊಂಡಂತಾಗುತ್ತದೆ. ಜನಸಾಮಾನ್ಯಕ್ಕೋಸ್ಕರ ಸಿದ್ಧವಾದ ಕಾರ್ಯಕ್ರಮದ ಪಟ್ಟಿಯನ್ನು ಕಾರ್ಯರೂಪಕ್ಕೆ ತರಲು ಖಂಡಿತವಾಗಿಯೂ ಸಾಧ್ಯವಿಲ್ಲ. ಹಿಂದಿನ ಕಾಲದಲ್ಲಿ ಇದಕ್ಕಾಗಿ ಪ್ರಯತ್ನಿಸಿದವರೆಲ್ಲರೂ ಒಂದು ಅಧಿಕೃತವಾಣಿಯ ಅಭಾವದಿಂದ ಹಿಂದುಳಿಯಬೇಕಾಯಿತು. ಮತ್ತು ಇಂತಹ ಕೆಲವು ಅಧಿಕೃತವಾಣಿಗಳಿಂದ ಧೈರ್ಯವಾಗಿ ಮುಂದುವರಿದವರೂ ಕೂಡಾ ಜನರ ಬೆಂಬಲವನ್ನು ಪಡೆಯದೇ ಹೋದರು. ಒಂದು ವೇಳೆ ಅವರು ಜಯಶೀಲರಾದರೂ ಅವರನು ಯಾರೂ ಸರಿಯೆಂದು ಹೇಳುತ್ತಿರಲಿಲ್ಲ. ಜರ್ಮನಿ ದೇಶದಲ್ಲಿ ರಾಷ್ಟ್ರೀಯ ಸಮಾಜ ಸುಧಾರಕ ಪಕ್ಷದ ಕಾರ್ಯಕ್ರಮವೂ, ಇಟಲಿಯಲ್ಲಿ ಫ್ಯಾಸಿಸ್ಟ್ ಪಕ್ಷದ ಕಾರ್ಯಕ್ರಮವೂ ಮತ್ತು ರಷ್ಯಾದೇಶದ ನಿರಂಕುಶಾಧಿಕಾರಿಗಳ ಕಾರ್ಯಕ್ರಮವೂ ಕೂಡಾ ನೈತಿಕ ಮತ್ತು ಸಾಮಾಜಿಕ ದೃಷ್ಟಿಯಿಂದ ಶುದ್ಧ ಮತ್ತು ನಿಷ್ಪಕ್ಷಪಾತ ಎಂದು ಹೇಳಲಾಗುವುದಿಲ್ಲ. ಆದ್ದರಿಂದ ಕೇವಲ ವಿಮರ್ಶಾತ್ಮಕ ದೃಷ್ಟಿಯಿಂದ ನಾವು ನೋಡಿದರೂ ಈ ರೀತಿಯ ಪರಿಶೀಲನೆಯು ವಿಶದವಾದ ನಡತೆಯ ಒಂದು ನಿಘಂಟಾಗಲಾರದು. ನಾವು ಹಿಂದೆಯೇ ಪ್ರತಿಯೊಬ್ಬ ಮನುಷ್ಯನ ಅಧ್ಭುತವಾದಶಕ್ತಿ, ಬುದ್ಧಿ ಮತ್ತು

ಸಾಮರ್ಥ್ಯಗಳನ್ನು ತನ್ನ ಸಮಾಜದ ಕಾರ್ಯಕಲಾಪಗಳಿಗೆ ಅನ್ವಯಿಸುವಂತೆ ಮಾಡುವುದು ಅತ್ಯಾವಶ್ಯಕವೆಂದು ಒತ್ತಿ ಹೇಳಿದ್ದೇವೆ. ಆದ್ದರಿಂದ ಈಗ ನಾವು ಅವನ ಸಂಪೂರ್ಣವಾದ ಬೆಳವಣಿಗೆಗೆ ಅತಿ ಮುಖ್ಯವಾದ ಆವಶ್ಯಕತೆಗಳನ್ನು ಸೂಚಿಸುತ್ತೇವೆ. ಕಾಲವು ಬದಲಾಯಿಸಿದಂತೆಲ್ಲಾ ಹೊಸ ಚೈತನ್ಯಗಳು ಮತ್ತು ಗುಣಗಳು ಜನರಲ್ಲಿ ಅಂಕುರಿಸುತ್ತದೆ. ಅಂತ್ಯವಾದ ಈ ವಿವರಣೆಯಲ್ಲಿ ನಾವು ಪರಿಪೂರ್ಣತೆಯನ್ನು ಪಡೆಯಲು ಉಪಯುಕ್ತವಾದ ಈ ಕೆಳಗೆ ಕಂಡ ವಿಷಯಗಳನ್ನು ಸಂಗ್ರಹಿಸಬಹುದು. ಅವು ಯಾವುವೆಂದರೆ— ೧ ಸರ್ವಸಾಮಾನ್ಯವಾದ ನಂಬಿಕೆ. ೨ ಆತ್ಮಾವಲಂಬನೆ. ೩ ಅರ್ಹತೆ ಅಥವಾ ಯೋಗ್ಯತೆ. ೪ ಯುವಕ ಕಾರ್ಯಕಲಾಪಗಳಲ್ಲಿ ದೀರ್ಘ ಕಾಲದ ಅನುಭವ.

೧) **ಸಾಮಾನ್ಯ ಧರ್ಮ ಅಥವಾ ನಂಬಿಕೆ:**—ಸಮಾಜ ದೃಷ್ಟಿಯಿಂದ ನಾವು ನೈತಿಕ ಬಲವನ್ನು ಪಡೆಯುವುದು ಅಗತ್ಯ. ಇದು ಸಮಾಜದಲ್ಲಿ ಇಲ್ಲದಿದ್ದ ಪಕ್ಷದಲ್ಲಿ ರೂಸೋ ಕವಿಯು ಸೂಚಿಸುವಂತೆ ಆ ಸಮಾಜದ ಅವನತಿಯು ಖಂಡಿತ. ಪಕ್ಷೀಯ ಆಸಕ್ತಿಗಳ ಮಿಥ್ಯಾವಾದವನ್ನು ನಾವಾಗಲೇ ಚರ್ಚೆ ಮಾಡಿಬಿಟ್ಟಿದ್ದೇವೆ. ನಮ್ಮ ಕಾರ್ಯಕ್ರಮಗಳನ್ನು ವಿಶದೀಕರಿಸಿದ ಹೊರತು ಮತ್ತು ಬುದ್ಧಿಯ ವಿಕಾಸವನ್ನು ಹೊಂದಿದ ಹೊರತು ನಾವು ಮೇಲೆ ಹೇಳಿದ ವಿಷಯವನ್ನು ಮತ್ತೆ ಮತ್ತೆ ಹೇಳಿ ಪ್ರಯೋಜನವಿಲ್ಲ. ಅಲ್ಲದೆ ನಾವು ಉದಾರಿಗಳೂ ಪ್ರಗತಿಶೀಲರೂ ಆಗುವುದು ಸಾಧ್ಯವಿಲ್ಲ. ನಮ್ಮ ಒಡನಾಡಿಗಳಿಗೆ ನಾವು ತೋರಿಸುವ ಶ್ರೇಷ್ಠತಾ ಭಾವನೆಯೇ ಸಣ್ಣ ಸಣ್ಣ ಸಂಸಾರ ಕಲಹಗಳಿಗೂ ಮತ್ತು ನಾಶಕಾರಕವಾದ ಅಂತರ್ರಾಷ್ಟ್ರೀಯ ಸಮರಗಳಿಗೂ ಕಾರಣವಾಗಿರುತ್ತದೆ. ವರ್ಣವಿದ್ವೇಷದ ಪ್ರಧಾನ ಹೇತುವು ಇಲ್ಲಿಯೇ ಅಡಗಿರುವುದು. ಆದ್ದರಿಂದ ಜವಾಬ್ದಾರಿಯುತವಾದ ಮತ್ತು ಪುಷ್ಟಿಕರವಾದ ಸಾಮಾನ್ಯ ನಂಬಿಕೆಯೇ ನಮ್ಮೆಲ್ಲರನ್ನೂ ಕರ್ತವ್ಯಪರರನ್ನಾಗಿ ಮಾಡುತ್ತದೆ. ಸಣ್ಣ ಸಣ್ಣ ಕುಂದು ಕೊರತೆಗಳನ್ನು ನಿರ್ಮೂಲ ಮಾಡುವುದಕ್ಕೂ ನ್ಯಾಯವನ್ನೂ, ಧರ್ಮವನ್ನೂ, ಸೌಜನ್ಯವನ್ನೂ ಉತ್ತಮಗೊಳಿಸಲಿಕ್ಕೂ ಈಗ ನಮಗೆ ಅತ್ಯಾವಶ್ಯಕವಾಗಿ ಬೇಕಾಗಿರುವುದು, ಅಂತರ್ರಾಷ್ಟ್ರೀಯ ಭ್ರಾತೃಭಾವನೆ. ಹಿಂದಿನ ಕಾಲದಲ್ಲಿ ಅಂತರ್ರಾಷ್ಟ್ರೀಯ ಜೀವನವು

ಪರಸ್ಪರ ಕಲಹಗಳಲ್ಲಿಯೋ ಕೊನೆಗಾಣುತ್ತಿತ್ತು. ಅದು ಹೋಗಿ ಈಗ ಪರಸ್ಪರ ಸಂಪರ್ಕವುಂಟಾಗಿದೆ. ಅಲ್ಲದೆ ಈಗ ಪರಸ್ಪರ ಸಹಾಯ ಮಾಡುವ ಸ್ಥಿತಿಗೆ ಮುಂದುವರಿದಿದ್ದೇವೆ. ಆದ್ದರಿಂದ ನಮ್ಮ ಗುರಿ ಏನಂದರೆ ಪರಸ್ಪರ ಸಹವಾಸಿಗಳಾಗುವುದೇ ಆಗಿದೆ. ಶಾಂತಿಯುತವಾದ ಮತ್ತು ಬಲಿಷ್ಠವಾದ ಶ್ರೀಮಂತ ಸಮಾಜಕ್ಕೆ ತಳಹದಿಯೇ ಈ ಅಂತರ್ರಾಷ್ಟ್ರೀಯ ಸಹವಾಸ ಅಥವಾ ಸಂಪರ್ಕ

೨) **ಆತ್ಮಾವಲಂಬನೆ**:— ಮನುಷ್ಯನಲ್ಲಿ ಸದಾಕಾಲದಲ್ಲಿಯೂ ಅನೇಕ ಆಶೆಗಳು ಅಂತರ್ನಿಗೂಢವಾಗಿರುತ್ತವೆ. ಈ ಆಶೆಗಳಿಂದ ಅನೇಕ ಫಲಕಾರಿಯಾದ ಕೃತ್ಯಗಳನ್ನೆಸಗಬಹುದು. ಈ ಪಕ್ಷರಹಿತವಾದ ಆಶೆಗಳನ್ನು ಪಕ್ಷಯುತವಾದ ತೀರ್ಮಾನಗಳನ್ನಾಗಿ ಮಾರ್ಪಡಿಸುವುದೇ ನಮ್ಮ ಮುಂದಿರುವ ಮಹತ್ಕಾರ್ಯ. ಇದನ್ನು ಸಾಧಿಸುವ ಸಲುವಾಗಿಯೇ ನಮ್ಮಲ್ಲಿ ಆತ್ಮಾವಲಂಬನೆಯ ಗುಣವಿರಬೇಕು. ಈ ಆಶೆಗಳನ್ನು ವೈಯಕ್ತಿಕ ದೃಷ್ಟಿಯಿಂದ ನೋಡಿದರೂ ಒಂದು ಪಂಗಡದ ಸಾಂಸ್ಕೃತಿಕ ತೊಡಕುಗಳ ಮೂಲಕ ನೋಡಿದರೂ ಅದರ ಬೆಲೆಯನ್ನು ಕಂಡುಹಿಡಿಯುವುದು ಅಗತ್ಯ. ಅಂದರೆ ಆ ಆಶೆಗಳನ್ನು ಕಾರ್ಯರೂಪಕ್ಕೆ ತರುವುದೇ ನಮ್ಮ ಪ್ರಥಮ ಕರ್ತವ್ಯ ಪ್ರತಿಯೊಬ್ಬ ವ್ಯಕ್ತಿಯ ಮಾನಸಿಕ ಜೀವನದಲ್ಲಿ ವಿಚಿತ್ರವಾದ ಕೆಲವು ಒತ್ತಡಗಳಿವೆ. ಅವುಗಳನ್ನು ಕೂಡಾ ಕಾರ್ಯರೂಪಕ್ಕೆ ತರಲೇ ಬೇಕಾಗುತ್ತದೆ. ಆದ್ದರಿಂದ ವಿಶಾಲವಾದ ಜ್ಞಾನ ಮತ್ತು ಸೂಕ್ತವಾದ ಸಂಗ್ರಹದ ಸೂಕ್ಷ್ಮಾವಲೋಕನೆಗೆ ಇವುಗಳ ಮೇಲೆ ಆಧಾರವಾಗಿರುವ ಆತ್ಮಾವಲಂಬನೆಯು ಯಾವ ಕೆಲಸವನ್ನಾದರೂ ಸಫಲಗೊಳಿಸುತ್ತದೆ.

೩) **ಯೋಗ್ಯತೆ**:— ಆಧುನಿಕ ಜಿವನಕ್ಕೆ ಯೋಗ್ಯತೆಯೇ ಒಂದು ಅಳತೆಯ ಸಾಧನ. ನಾವು ನೋಡಿದಂತೆ ಆಧುನಿಕ ಜೀವನವು ಮನುಷ್ಯನ ವೈಯ್ಯಕ್ತಿಕ ಅಥವಾ ಆಂತರಿಕ, ಸಾಮಾಜಿಕ ಅಥವಾ ಸಾಂಘಿಕ ಯೋಗ್ಯತೆಗಳ ಮಿಶ್ರಣವಾಗಿದೆ. ವೈಯುಕ್ತಿಕ ಯೊಗ್ಯತೆ ಅಥವಾ ಅರ್ಹತೆಯು ದೇಹ, ಬುದ್ಧಿ, ಮನಸ್ಸು ಮತ್ತು ಆತ್ಮಗಳ ಬೆಳವಣಿಗೆಯಲ್ಲಡಗಿದೆ. ಸಮಾಜವು ಪ್ರತಿವ್ಯಕ್ತಿಗೂ ನೀಡತಕ್ಕ ಅವಕಾಶಗಳ ಸಾಮರಸ್ಯದ ಅವಶ್ಯಕತೆಯನ್ನು

ಉಪೇಕ್ಷಿಸಲಾಗದು. ಇದು ನಿಜವಾಗಿಯೂ ಪರಿಪೂರ್ಣತೆಯನ್ನು ಹೊಂದಿದ ಸಾಮಾಜಿಕ ಜೀವನದ ಮುಖ್ಯಾವಶ್ಯಕತೆಯೆಂದು ಸಾಧಿಸಿದೆ. ನಮ್ಮ ಸಾಮಾಜಿಕ, ಸಂಸಾರಿಕ ಮತ್ತು ರಾಷ್ಟ್ರೀಯ ಜೀವನದಲ್ಲಿ ಕಂಡುಬರುವ ಅನೇಕ ಲೋಪದೋಷಗಳು ಈ ಅವಕಾಶಭರದಲ್ಲಿ ಜನ್ಮ ತಾಳುತ್ತವೆ. ಇವರ ಸಹಜ ಪರಿಣಾಮವೆಂದರೆ ದೈಹಿಕ ವ್ಯಾಯಾಮ, ತೃಪ್ತಿಕರವಾದ ಶಿಕ್ಷಣ, ಧ್ಯೇಯದಿಂದ ಕೂಡಿದ ಕಾರ್ಯಕಲಾಪಗಳು ಮತ್ತು ಮನೋಲ್ಲಾಸ ಇವುಗಳು ಮುಖ್ಯವಾದವುಗಳು. ದೈಹಿಕ ದೃಷ್ಟಿಯಿಂದ ಆಧುನಿಕ ಯುವಕನು ಅಪ್ರಯೋಜಕನಾಗಿದ್ದಾನೆ. ಇದರ ಮಾನಸಿಕ ಮತ್ತು ಆರ್ಥಿಕ ಪರಿಣಾಮಗಳು ನಮ್ಮ ನಿತ್ಯಜೀವನದಲ್ಲಿ ಪ್ರಧಾನವಾಗಿ ಕಂಡುಬಂದು ನಮ್ಮನ್ನು ಅಪಾಯಕರ ಸ್ಥಿತಿಗೆ ಒಯ್ಯುತ್ತವೆ. ಆದ್ದರಿಂದ ಈಗ ವ್ಯಾಯಾಮ ಶಾಲೆಗಳೂ, ಕ್ರೀಡಾರಂಗಗಳೂ ಮತ್ತು ಉದ್ಯಾನವನಗಳೂ ಹೇರಳವಾಗಿ ಬೇಕಾಗಿವೆ. ನಮ್ಮ ಭವಿಷ್ಯದ ರೂಪರಚನೆಯಲ್ಲಿ ಇವು ಪ್ರಾಮುಖ್ಯತೆಯನ್ನು ಪಡೆದಿವೆ. ಏಕೆಂದರೆ ದೇಹದಾರ್ಢ್ಯವಿದ್ದರೆ ಬುದ್ಧಿಯು ಖಂಡಿತವಾಗಿಯೂ ವಿಕಾಸ ಹೊಂದುತ್ತದೆ.

**ಸಾಂಘಿಕ ಯೋಗ್ಯತೆ:—** ಹೀಗೆ ಮನೋಲ್ಲಾಸಕ್ಕೂ ಕಾರ್ಯಕಲಾಪಗಳಿಗೂ ಇರುವ ಅವಶ್ಯಕತೆಯು ನಮ್ಮನ್ನು ಹೊಸ ಜೀವನಗಳಿಗೂ ಮತ್ತು ಸಂಘಸ್ಥಾಪನೆಗಳಿಗೂ ಒಯ್ಯುತ್ತದೆ. ಔದ್ಯೋಗಿಕ ಅರ್ಹತೆಗೆ ಸಾಂಘಿಕ ಅರ್ಹತೆಯು ಅತ್ಯಾವಶ್ಯಕ. ಈ ಶತಮಾನದಲ್ಲಿ ಔದ್ಯೋಗಿಕ ಅರ್ಹತೆಯಿಲ್ಲದ ಜೀವನವು ಅಸಾಧ್ಯ. ಈ ಪ್ರಪಂಚದಲ್ಲಿ ಅಸಂಖ್ಯಾತವಾದ ಶಕ್ತಿಗಳಿವೆ. ಇವೆಲ್ಲವೂ ಮಾನವನ ವ್ಯಕ್ತಿತ್ವವನ್ನು ರೂಪುಗೊಳಿಸಲು ಪ್ರಯತ್ನಿಸುತ್ತವೆ. ಇವು ಪರಸ್ಪರ ವಿರುದ್ಧವಾಗಿಲ್ಲದಿದ್ದರೂ ಕೂಡ ಎರಡು ಪರಸ್ಪರ ಹೊಂದಿಕೊಳ್ಳಬಹುದಾದ ಪರಿಣಾಮಗಳ ವಿಭಾಗಗಳನ್ನಾಗಿ ಅವುಗಳನ್ನು ವಿಂಗಡಿಸಬಹುದು. ಈ ಎರಡು ಪರಿಣಾಮಗಳ ಸಾಮರಸ್ಯವೇ ಜೀವನದ ಮಹತ್ವವೆನಿಸಿಕೊಳ್ಳುವುದು. 'ಆರ್ಕಿಮಿಡಿಸ್' ಎಂಬ ವಿಜ್ಞಾನಿಯು ಈ ವಿಚಿತ್ರ ಸಮಸ್ಯೆಯನ್ನು ಕೇವಲ ಕೆಲವು ಮಾತುಗಳಲ್ಲಿ ಈ ಪ್ರಕಾರವಾಗಿ ವಿವರಿಸಿದ್ದಾನೆ. "ಅಡವನ್ನಿಡಲು ನನಗೆ ಒಂದು ಆಧಾರ ವಸ್ತುವನ್ನು ಕೊಟ್ಟ ಪಕ್ಷದಲ್ಲಿ ಭೂಗೋಳವನ್ನೇ ಚಲಿಸುತ್ತೇನೆ." ಆದ್ದರಿಂದ ಅಸಂಪೂರ್ಣ

ವಾದ, ಅನ್ಯಾಯವಾದ, ನಿಃಸಹಾಯಕವಾದ ಮತ್ತು ಜಡವಾದ ಜೀವನದ ರೀತಿಯಿಂದ ನಾವು ಪಾರಾಗಬೇಕಾದರೆ ಈ ವಿಧವಾದ ಸಾಮರಸ್ಯವು ಅತ್ಯಗತ್ಯ. ಮಾನವ ಜೀವನವನ್ನೇ ಸುತ್ತಿಕೊಂಡಿರುವ ಎರಡು ಮುಖ್ಯಶಕ್ತಿಗಳೆಂದರೆ ಮಾನವ ಸಮಾಜ ಮತ್ತು ಅಸಾಧ್ಯತಾಳ್ಮೆ. ಇವೆರಡರ ದೈವಿಕ ಸಾಮರಸ್ಯವು ನಮ್ಮಲ್ಲಿ ಸೌಂದರ್ಯದ ಅರಿವನ್ನೂ ಮಾನವೀಯತೆಯ ಭಾವನೆಯನ್ನೂ ಮತ್ತು ಶೀಲದ ಸಾಮರ್ಥ್ಯವನ್ನೂ ಸೃಷ್ಟಿಮಾಡುತ್ತದೆ. ಆದ್ದರಿಂದ ವ್ಯಕ್ತಿತ್ವವು ಈ ಮೂರು ಸ್ತಂಭಗಳ ಆಧಾರದ ಮೇಲೆ ನಿಲ್ಲತಕ್ಕದ್ದಾಗಿದೆ. ಅದಿಲ್ಲದಿದ್ದರೆ ಅದು ಪತನವಾಗುವುದರಲ್ಲಿ ಸಂದೇಹವಿಲ್ಲ.

೪) **ಯುವಕ ಕಾರ್ಯಕಲಾಪಗಳ ದೀರ್ಘಕಾಲದ ಅನುಭವ.**

ಯೌವನದ ಕಾಲಪ್ರಮಾಣವನ್ನು ಹೆಚ್ಚಿಸುವುದೇ ನಡತೆಯನ್ನು ತಿದ್ದಿಕೊಳ್ಳುವ ವಿಧಾನಗಳಲ್ಲಿ ಕೊನೆಯದಾಗಿದೆ. ಸಾಮಾಜಿಕ ಭಾವನೆಗಳು ಇವೆಯೇ ಇಲ್ಲವೇ ಎಂಬುದು ವಿವಾದಾಸ್ಪದವಾದ ಸಮಸ್ಯೆ. ಮಾನವನ ಮನಸ್ಸು ದುಷ್ಪರಿಣಾಮಗಳಿಗೆ ಈಡಾದರೂ ಕೂಡ, ಜ್ಞಾನದ ಹೊಳೆಯು ನಿರಂತರವಾಗಿ ಹರಿಯುತ್ತಿದ್ದ ಪಕ್ಷದಲ್ಲಿ ಮತ್ತು ಸತ್ಪರಿಣಾಮಕಾರಕವಾದ ಅನುಭವವಿದ್ದಲ್ಲಿ ಆ ದುಷ್ಪರಿಣಾಮಗಳು ಶಾಶ್ವತವಾಗಿ ಇರಲಾರವು. ಭಾರತದಲ್ಲಿ ಹಿಂದಿನ ಪದ್ಧತಿಗನುಸಾರವಾಗಿ ಅಥವಾ ಕುಲವೃತ್ತಿಗಳಿಗನುಸಾರವಾಗಿ ಬಂದಂಥಾ ಉದ್ಯೋಗಗಳನ್ನು ಕೇವಲ ಚಿಕ್ಕವಯಸ್ಸಿನಲ್ಲೇ ಅವಲಂಬಿಸಲು ಯುವಕನನ್ನು ಬಲಾತ್ಕರಿಸುವುದರಿಂದ ಅಪರಿಮಿತವಾದ ನಷ್ಟವುಂಟಾಗಿದೆ. ಯೌವನದ ಕಾಲವು ಹೆಚ್ಚಾದಂತೆಲ್ಲಾ ಅವನ ಬುದ್ಧಿಯು ಬೆಳವಣಿಗೆಯು ಹೆಚ್ಚು ಸಹಾಯಕವಾಗುತ್ತದೆ. ಇಲ್ಲದಿದ್ದರೆ ಭಾವನೆಗಳು ತಡೆಯಲ್ಪಟ್ಟು, ಕೆಲವು ವೇಳೆ ಬುದ್ಧಿಯು ಅವುಗಳನ್ನು ನಾಶಪಡಿಸಬಹುದು.

ನಮ್ಮ ಚರ್ಚೆಯನ್ನು ಕೊನೆಗಾಣಿಸುವ ಮುನ್ನ ನಮ್ಮ ಸಮಾಜದ ನಾಲ್ಕು ಮುಖ್ಯ ಸಂಸ್ಥೆಗಳ ಆದರ್ಶಗಳನ್ನು ಗಮನಿಸೋಣ. ಈ ಸಂಸ್ಥೆಗಳು ಯಾವುವೆಂದರೆ—

೧. ಸರ್ಕಾರ.
೨. ಕೈಗಾರಿಕೆ.
೩. ವಿದ್ಯಾಭ್ಯಾಸ.

## ೪. ವ್ಯವಸಾಯ.

**ಸರ್ಕಾರ:—** ದೈವಾನುಗ್ರಹವನ್ನು ಪಡೆದ ಕೆಲವು ಮಹಾ ಮೇಧಾವಿಗಳ ಮುಖ್ಯ ಸಾಧನಗಳ ಸತ್ಪರಿಣಾಮವಾಗಿ "ಜನರ ಮಹತ್ವ" ವನ್ನು ತೂಕಮಾಡಿ ನೋಡಿದ್ದೇವೆ. (-ಹಿಟ್ಲರ್) ಇದೇ ಆಧಾರದ ಮೇಲೆ ಹಿಂದಿನ ಕಾಲದ ಭಾರತೀಯ ಅಂತಸ್ತೂ ಕೂಡ ನಿಂತಿದೆ. ಇನ್ನು ಮೇಲೆ ಮನುಷ್ಯನು ಲಾಭವನ್ನು ಪಡೆಯಬೇಕು ಮತ್ತು ಪ್ರತಿಯೊಬ್ಬ ಸಾಮಾನ್ಯ ಪ್ರಜೆಯೂ ದೈವಾನುಗ್ರಹವನ್ನು ಪಡೆದ ಮೇಧಾವಿಯಾಗಲೇ ಬೇಕಾಗುತ್ತದೆ. ಅನೇಕ ಶತಮಾನಗಳ ಅಜ್ಞಾನಾಂಧಕಾರಗಳಿಂದ ಬಿಡುಗಡೆ ಮಾಡತಕ್ಕ ಸ್ವಾತಂತ್ರ್ಯವು ಅವನದೇ ಆಗುತ್ತದೆ. ಜ್ಞಾನವು ಒಂದು ವಿಧವಾದ ಪರಾಧೀನತೆಯಿಂದ ಪಾರಾಗಲು ಸಹಾಯ ಮಾಡುತ್ತದೆ. ಅವನು ಇನ್ನು ಮೇಲೆ ಆಧಾರವೆನಿಸಿದ ಮತಧರ್ಮವನ್ನೂ ಆರ್ಥಿಕ ದೃಷ್ಟಿಯಲ್ಲಿ ದಬ್ಬಾಳಿಕೆಯನ್ನೂ ಖಂಡಿಸುತ್ತಾನೆ. ವೈಯಕ್ತಿಕ ಜೀವನ, ಪರಸ್ಪರ ಸಹಾಯ, ಒಮ್ಮತ ಇವುಗಳೇ ಮಾನವ ಜೀವನವನ್ನು ಸರಿಮಾಡಬಲ್ಲವು. ಸಾಂಘಿಕ ಜವಾಬ್ದಾರಿಯು ನಾಯಕರ ತಂಡವನ್ನೇ ಸೃಷ್ಟಿಸಬಲ್ಲುದು. ಸ್ಥಳೀಯ ರಾಜಕೀಯವೇ ನಿಜವಾದ ರಾಜಕೀಯವೆಂದು ನಾವು ಅರಿಯಬೇಕಾದುದು ಅತ್ಯಗತ್ಯವಾಗಿದೆ.

**ಕೈಗಾರಿಕೆ:—** ಆಧುನಿಕ ಸಮಾಜದಿಂದ ಉತ್ತೇಜಿಸಪ್ಪಟ್ಟ ಕೇಂದ್ರೀಕೃತ ಕೈಗಾರಿಕೆಗಳ ಪದ್ಧತಿಯು ಸ್ಥಳೀಯ ಸ್ವಾತಂತ್ರ್ಯವನ್ನೂ ಹೆಚ್ಚಾಗಿ ತಡೆಗಟ್ಟಿದೆ. ಸಮಾಜಸುಧಾರಣೆಯೂ ನಮ್ಮ ಆರ್ಥಿಕ ಜೀವನವೂ ಒಯ್ಯಲ್ಪಟ್ಟಿರುವ ಮಾರ್ಗದಲ್ಲಿ ಅಭೂತಪೂರ್ವವಾದ ಪ್ರೇರಣಾಶಕ್ತಿಯನ್ನು ಉಂಟುಮಾಡಿದೆ. ಜೇಮ್ಸ್ ಬರ್ ಹ್ಯಾಮ್ ಎಂಬ ಮಹಾಶಯರು "ದಿ ಮಾಂಜೀರಿಯಲ್ ರೆವೆಲ್ಯೂಷನ್" ಎಂಬ ತಮ್ಮ ಅಮೋಘವಾದ ಗ್ರಂಥದಲ್ಲಿ ರಷ್ಯಾದೇಶದ ಪ್ರಜಾಪ್ರಭುತ್ವ ಸಂಸ್ಥೆಯು ಯಾವ ಮಾರ್ಗದಲ್ಲಿ ಮುನ್ನಡೆದಿದೆ ಎಂಬುದನ್ನು ಸೂಚಿಸಿದ್ದಾರೆ. ಡಾ|| ಬರ್ನ್ಹಾಮ್ ಮಹಾಶಯರು ಮಾನವ ಸ್ಥಿತಿಯ ಭವಿಷ್ಯದ ವಿಷಯವಾಗಿ ಸ್ವಲ್ಪ ಸಂಶಯುಗುಸ್ತರಾಗಿ ಪ್ರತಿಯೊಬ್ಬ ವ್ಯಕ್ತಿಯ ಆಶೆ, ಆಕಾಂಕ್ಷೆಗಳು ವ್ಯಾವಹಾರಿಕ ಮತ್ತು ಅಧಿಕಾರಿಕ ಯಜಮಾನರ ಅಧೀನದಲ್ಲಿ ಇರುವ ವಿಶ್ವದ ಪರಾಧೀನತೆ

ಯಿಂದ ಕುಗ್ಗಿದೆಯೆಂದು ನಿರಾಕರಿಸುತ್ತಾರೆ.

ನಾವು ಇನ್ನೊಂದು ವಿಷಯವನ್ನು ಗಮನಿಸಬೇಕಾಗಿದೆ. ಈಗಲೂ ಕೂಡ ಅನೇಕರು ಕೂಲಿಗಾರರ ಅಂತಸ್ತಿನ ವಿಷಯವಾಗಿ ತಪ್ಪು ಅಭಿಪ್ರಾಯಗಳನ್ನುಳ್ಳವರಾಗಿದ್ದಾರೆ. ಇವರಿಂದ ಭಾರತದಲ್ಲಿ ಅನೇಕ ದುಷ್ಪರಿಣಾಮಗಳುಂಟಾಗಿವೆ. ಪ್ರತಿಯೊಂದು ಕೆಲಸಕ್ಕೂ ಒಂದೊಂದು ವೈಶಿಷ್ಟ್ಯ ಮತ್ತು ಪ್ರಯೋಜನ ಇವುಗಳು ಇದ್ದೇ ಇವೆ ಎಂದು ನಾವು ಅರಿಯಲೇಬೇಕು. ಸಮಾಜದಲ್ಲಿ ಸ್ತ್ರೀಯರು ಮಾಡುವ ಕೆಲಸಕ್ಕೆ ವಿಶೇಷ ಪ್ರಾಮುಖ್ಯತೆಯಿರಬೇಕು. ಈ ರೀತಿ ನಾವು ಪ್ರತಿ ಕೆಲಸದ ಪ್ರಯೋಜನವನ್ನೂ ಅರಿತ ಮೇಲೆಯೇ "ಅವನು ದೇವರಿಗೋಸ್ಕರ ಮತ್ತು ಅವಳು ಅವನಲ್ಲಿರುವ ದೇವರಿಗೋಸ್ಕರ." (ಎಂದು ಮಿಲ್ಟನ್ ಹೇಳಿದಂತೆ) ಎಂಬ ಭಾವನೆಯನ್ನು ತೋರಿಸಬಹುದು. ಈ ಅರಿವಿನಿಂದಲೇ ನಾವು ಪ್ರಕೃತಿಯ ದುಷ್ಪರಿಣಾಮಗಳನ್ನು ಗೆಲ್ಲಬಹುದು. ಇದನ್ನು ನಾವು ಎಷ್ಟು ಜಾಗ್ರತೆ ಅರಿತು ಕೆಲಸ ಮಾಡುತ್ತೇವೆಯೋ ಅಷ್ಟು ಜಾಗ್ರತೆ ಮಾನವನು ತನ್ನ ಧ್ಯೇಯ ಸಾಧನೆಯಲ್ಲಿ ಜಯಶೀಲನಾಗುತ್ತಾನೆ. ಮಾನವನನ್ನು ರೂಪಾಯಿ ಆಣೆ ಕಾಸುಗಳಲ್ಲಿ ಬೆಲೆ ಕಟ್ಟಿದ ಪಕ್ಷದಲ್ಲಿ ಕ್ರಾಂತಿಯ ಪ್ರಯತ್ನದ ನಿಷ್ಫಲವುಂಟಾಗಿ ಸೃಷ್ಟಿಶಕ್ತಿಯು ನಾಶವಾಗುತ್ತದೆ.

## ವಿದ್ಯಾಭ್ಯಾಸ

ವಿದ್ಯಾಭ್ಯಾಸದಲ್ಲಿ ವಿಶೇಷ ಶಿಕ್ಷಣವನ್ನು ಪಡೆಯುವದೇ ನಮ್ಮ ಇಷ್ಟ. ಈ ವಿಶೇಷ ಶಿಕ್ಷಣವು ಔದ್ಯೋಗಿಕ ವಿಭಜನೆಯ ನಿಯಮಗಳನ್ನು ವ್ಯವಸ್ಥೆಗೊಳಿಸುವುದಲ್ಲದೆ ನಮ್ಮ ಜ್ಞಾನವನ್ನು ನಿರಂತರವಾಗಿ ಅಭಿವೃದ್ಧಿಗೊಳಿಸಲು ಒಂದು ಅವಕಾಶವನ್ನು ಕಲ್ಪಿಸುತ್ತದೆ. ಜೀವನದಲ್ಲಿ—ಕೇವಲ ವಿದ್ಯಾಭ್ಯಾಸದ ಅಧ್ಯಯನಗಳಿಗಿಂತಲೂ ಮಿಗಿಲಾದ ಅನೇಕ ವಿಷಯಗಳಿವೆ. ನಿರ್ದಿಷ್ಟ ಅಧ್ಯಯನಕ್ಕೆ ಅಥವಾ ಕಾರ್ಯಕಲಾಪಕ್ಕೆ ಸಿದ್ಧರಾಗುವ ಮುನ್ನ ನಾವು ಜೀವನದ ಧ್ಯೇಯವನ್ನು ಅರಿಯಲು ಯತ್ನಿಸಬೇಕಾಗುತ್ತದೆ. ನಮ್ಮಲ್ಲಿರುವ (ಕಾತರತೆ) ವಿಮರ್ಶಾತ್ಮಕ ಶಕ್ತಿಯನ್ನು ಅಭಿವೃದ್ಧಿಗೊಳಿಸಿದರೆ ಅನೇಕವಿಷಯಗಳ ಸತ್ಯಾಂಶಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ವಿದ್ಯಾಭ್ಯಾಸವು ಆಶ್ಚರ್ಯಕರವಾದ ಪರಿಣಾಮಗಳನ್ನು ಉಂಟು

ಮಾಡಬಲ್ಲುದು. ಇನ್ನೂ ಸಾಕಷ್ಟು ಅನುಭವ ಪಡೆಯದೇ ಇರುವ ಯುವಕರ ಮನಸ್ಸಿನ ಮೇಲೆ ದುಷ್ಪರಿಣಾಮವನ್ನು ಉಂಟುಮಾಡುವುದು ಸರಿಯಲ್ಲವೆಂದು ನಾವು ಸೂಚಿಸಿದ್ದೇವೆ. ಉಪಾಧ್ಯಾಯನಾದವನು ಅವ್ಯವಸ್ಥಿತ ಚಿತ್ತನಾಗಿರಕೂಡದು. ಮತಪ್ರಸಾರ ಮಾಡುವುದು ಅವನ ಕರ್ತವ್ಯವಲ್ಲ; ಬಲಾತ್ಕರಿಸುವುದೂ ಅವನ ಕರ್ತವ್ಯವಲ್ಲ. ಯುವಕರು ಚೆನ್ನಾಗಿ ಅರಿಯಲು ಸಾಧ್ಯವಾಗುವ ಜೀವನದ ಸತ್ಯಾಂಶಗಳನ್ನು ಅವನ ಮುಂದಿಡುವುದೇ ಮುಖ್ಯ ಕರ್ತವ್ಯ. ನಾವು ಒಂದು ವಿಷಯವನ್ನು ಗಮನಿಸಬೇಕಾಗಿದೆ. ಅದೇನೆಂದರೆ ವಿದ್ಯಾಭ್ಯಾಸದ ಪವಿತ್ರತೆ. ವಿದ್ಯಾಭ್ಯಾಸದ ವ್ಯಾಪ್ತಿಯು ಪ್ರಕೃತಿಯ ವರಪ್ರದಾನವೂ, ಮನುಷ್ಯ ಪ್ರಯತ್ನದ ಮಾಧುರ್ಯವೂ ಆಗಿದೆ. ಅದನ್ನು ಮನುಷ್ಯನಿಗೆ ನೀಡದೆ ಇರುವುದಕ್ಕಾಗುವುದಿಲ್ಲ. ವಿದ್ಯಾರ್ಥಿಗಳಿಗೆ ನೀಡಬಹುದಾದ ವಿಷಯಗಳಲ್ಲಿ ಇದೇ ಪ್ರಥಮವಾಗಿದೆ. ಡಾ|| ಬ್ಲಾಟ್ಜ್ ಮಹಾಶಯರು ಕೂಡ ನಮ್ಮ ಸ್ಫೂರ್ತಿ ಅಥವಾ ಉತ್ಸಾಹಗಳು ಪ್ರಯೋಜನಕಾರಿಯೂ, ಆನಂದದಾಯಕವಾಗಿಯೂ, ರೋಮಾಂಚಕಾರಕವಾಗಿಯೂ, ಇವೆಯೆಂದು ಒತ್ತಿ ಹೇಳಿದ್ದಾರೆ. ವಿದ್ಯಾಭ್ಯಾಸ ಮತ್ತು ಸನ್ಮಾರ್ಗದರ್ಶನವು ಭಯ, ಮತ್ತು ಕ್ರೋಧ ಇವುಗಳ ಭೇದೋತ್ಪಾದಕ ಅನುಭವವನ್ನೂ, ನಾಶಕಾರಕ ಪರಿಣಾಮವನ್ನೂ ಕಡಿಮೆ ಮಾಡಬಲ್ಲದು.

ಒಬ್ಬ ವ್ಯಕ್ತಿಯ ನೈತಿಕ ಬೆಳವಣಿಗೆಯಲ್ಲಿ ಅರಿಸ್ಟಾಟಿಲ್ ಎಂಬ ತತ್ವಜ್ಞಾನಿಯು ಮೂರು ಸ್ಥಿತಿಗಳನ್ನು ಸೂಚಿಸುತ್ತಾನೆ. ಮೊದಲನೆಯದಾಗಿ ಸ್ವಾಭಾವಿಕವಾದ ವರ್ಣಮಿಲನವೂ ಪ್ರಾದೇಶಿಕ ಸನ್ನಿವೇಶವೂ ಇವೆ. ಎರಡನೆಯದಾಗಿ ಮಾನವನ ಮೇಲೆ ಧಾರ್ಮಿಕ, ಮತೀಯ, ಮತ್ತಿತರ ಸಂಸ್ಥೆಗಳನ್ನು ಬಲಾತ್ಕರಿಸತಕ್ಕ ಸಾಮಾಜಿಕ ಸ್ವಭಾವ ಮತ್ತು ವ್ಯಾಯಾಮವು ಇವೆ. ನೈತಿಕ ನಡವಳಿಕೆಯ ನಿಯಮಕ್ಕನುಸಾರವಾಗಿ ಜವಾಬ್ದಾರಿಯುತವಾದ ವೈಯಕ್ತಿಕ ಕಾರ್ಯಕಲಾಪವೇ ಕೊನೆಯದು. ಇದೇ ವಿದ್ಯಾಭ್ಯಾಸ. ಇದು ಮೊದಲೆರಡು ಸ್ಥಿತಿಗಳಲ್ಲಿ ಬೆಳವಣಿಗೆಯ ದುಷ್ಪರಿಣಾಮಗಳನ್ನು ಎದುರಿಸಬೇಕಾಗಿದೆ. " ಆದರ್ಶ ವಿದ್ಯಾಭ್ಯಾಸವೆಂದರೆ 'ಸದ್ಗುರೂಪನಯನ' (ಸದ್ಗುರುವಿನ ಬಳಿ ಶಿಷ್ಯನು ಪಡೆಯುವ ಉಪದೇಶ.) ಅದು ಮಾನವನ ಸಾಮರ್ಥ್ಯಗಳನ್ನು ಸಾಮಾಜಿಕ ಕಾರ್ಯರೂಪಗಳಲ್ಲಿ ಸಾಮರ್ಥ್ಯದ ಶಿಸ್ತನ್ನೂ ಮತ್ತು

ನೈತಿಕ ಮತ್ತು ಸೌಂದರ್ಯಾತ್ಮಕ ಧ್ಯೇಯಗಳನ್ನೂ ಸಾಧಿಸತಕ್ಕ ಕಾರ್ಯ ಕಲಾಪಗಳ ತರಬೇತನ್ನು ಹೊರಗೆಡಹುತ್ತದೆ. "—ರೀಡ್

**ವ್ಯವಸಾಯ:**— ಸಮಾಜವು ವ್ಯವಸಾಯವನ್ನು ನಿರ್ಲಕ್ಷಿಸಕೂಡದು. ಅಲ್ಲದೆ ವಿದ್ಯಾಭ್ಯಾಸವು ತನ್ನ ಕಾರ್ಯಕ್ರಮಗಳಲ್ಲಿ ಇದನ್ನು ಒಂದನ್ನಾಗಿ ಸೇರಿಸಿಕೊಳ್ಳಬೇಕು. ಇದಕ್ಕೆ ಒಂದು ನಿರ್ದಿಷ್ಟವಾದ ಕಾರ್ಯಕ್ರಮ ಮತ್ತು ಮಾರ್ಗವಿರಬೇಕು. ಕಾರ್ಯಕ್ರಮದ ಮುಖ್ಯಾಂಶಗಳು ಯಾವುವೆಂದರೆ:—

೧. ವ್ಯವಸ್ಥಾ ಮಂಡಲಗಳು.
೨. ಬೋಧನೆ.
೩. ಪ್ರದರ್ಶನ.
೪. ಮಾರ್ಗದರ್ಶನ.

ಮಾರ್ಗದರ್ಶನವು ಔದ್ಯೋಗಿಕ ಸಾಮರ್ಥ್ಯವನ್ನು ಅವಲಂಬಿಸಿರಬೇಕಲ್ಲದೆ ಮಾನಸಿಕ ಮತ್ತು ಸಾಂಸ್ಕೃತಿಕ ಪರೀಕ್ಷಾಶಕ್ತಿಯನ್ನು ಅರಿಯುವಂತಿರಬೇಕು. ಭೂಮಿಯನ್ನು ಉಳುವವನು ಆ ಭೂಮಿಯ ಸ್ವಾಮ್ಯವನ್ನು ಪಡೆದು ಅದರ ಫಸಲನ್ನು ಇತ್ಯರ್ಥಗೊಳಿಸಲು ಸಾಮರ್ಥ್ಯವುಳ್ಳವನಾಗಿರಬೇಕೆಂಬುದನ್ನು ನಾವು ಇಲ್ಲಿ ಗಮನಿಸಬೇಕಾಗಿದೆ.

ಈ ಎಲ್ಲಾ ವಿಷಯಗಳನ್ನು ವಿಮರ್ಶಿಸಿದ ಮೇಲೆ ನಮಗೆ ಮುಂದಟ್ಟಾಗುವ ಮುಖ್ಯ ಸತ್ಯಾಂಶಗಳೆಂದರೆ, ಮಾನವನ ದುಡಿತದ ಅಂತಸ್ತು, ಮತ್ತು ಮಾನವನ ಅಂತಸ್ತು ಈ ಜಗತ್ತಿನಲ್ಲಿ ಎಲ್ಲಾ ವಿಷಯಗಳಿಗಿಂತಲೂ ಅತಿ ಮುಖ್ಯವಾದುದು. ಈ ಸಂಸ್ಥೆಗಳಲ್ಲಿ ಇತರ ವಿಷಯಗಳನ್ನೂ ಅಥವಾ ಇತರ ಸಂಸ್ಥೆಗಳ ವಿಮರ್ಶೆಗಳನ್ನೂ ನಾವು ಗಮನಿಸಿಲ್ಲ.

ವೈಯಕ್ತಿಕ ಅರ್ಹತೆಯ ಸೃಷ್ಟಿಯಲ್ಲಿ ನಾವು ಆತ್ಮವನ್ನು ಸೇರಿಸಿದ್ದೇವೆ. ಆತ್ಮವು ವಿವರಣಾತೀತವಾದುದು. "ಅದು ಮಾನವನಿಗೆ ಮೀರಿಸ್ಟು ಮತ್ತು ದೈವಿಕವಾದುದು" ಎಂಬುದಾಗಿ ನಮ್ಮ ಅನುಭವದ ಆಧಾರದ ಮೇಲೆ ತಿಳಿದುಕೊಂಡಿದ್ದೇವೆ. ಆದರೆ ಆ ಪದವನ್ನು ಆ ಅರ್ಥದಲ್ಲಿ ಉಪಯೋಗಿಸುತ್ತಿಲ್ಲ. ಅತ್ಯಂತ ಪ್ರಗತಿಶೀಲರಾದ ವಿಮರ್ಶಕಾರರೂ ಕೂಡ (ನೀಷೆ ಅಥವಾ ಷಾ ಎಂಬ ತತ್ವಜ್ಞರು ಹೇಳಿರುವಂತೆ) ನಮ್ಮಲ್ಲಿ ಒಂದು ಅಮಾನುಷವಾದ ಶಕ್ತಿಯು ಇದೆಯೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಜಾರ್ಜ್

ಬರ್ನಾರ್ಡ್‌ಷಾ ಮಹಾಶಯನು ಅದನ್ನು "ಜೀವಶಕ್ತಿ" ಎಂದು ಮತ್ತೆ ಮತ್ತೆ ವಿಮರ್ಶಿಸಿದ್ದಾನೆ. ಉತ್ತಮ ಪದದ ಅಭಾವದಿಂದ ಅದನ್ನು ಆತ್ಮ ವೆಂದು ಕರೆಯಬೇಕಾಗಿದೆ. ಅದು ಜೀವನದಲ್ಲಿ ಸ್ವಲ್ಪ ಅಥವಾ ಮಹತ್ತಾದ ಅಥವಾ ಅಮೇಯವಾದ ಪ್ರಾಮುಖ್ಯತೆಯನ್ನು ಪಡೆದ ವಿಷಯಗಳನ್ನೆಲ್ಲಾ ಒಟ್ಟುಗೂಡಿಸಬೇಕು. ನೈಜ ಜೀವನವನ್ನು ಸುಂದರಾಕೃತಿಯಿಂದ ಮುಚ್ಚಲೇ ಬೇಕು. ಮತ್ತೂ ಕೊನೆಯದಾಗಿ ಅದು ವಾಸ್ತವಿಕತೆಯ ರೂಪವನ್ನು ಪ್ರದರ್ಶಿಸಿ ಮುಂದುವರಿಯಬೇಕು. ಜೀವನದಲ್ಲಿ ಸೌಂದರ್ಯ, ಪ್ರಾಮಾಣಿಕತೆ ಮತ್ತು ವೃತ್ತಿ ಇರಬೇಕು. ಇದೇ ಜೀವನದ ತತ್ವ.

ಪ್ರಪಂಚದ ಕಾರ್ಯಕಲಾಪಗಳಲ್ಲಿ ಒಂದು ಸ್ಥಾನವನ್ನು ಪಡೆಯಬೇಕು. ಅವರಿಗೆ ಬೇಕಾದುದು ಗೌರವ ಮತ್ತು ಮಹತ್ತ್ವ. ವೈಯಕ್ತಿಕ ತೃಪ್ತಿಗೂ ಸಾಮಾಜಿಕ ಜೀವನಕ್ಕೂ ಇದೇ ಕೀರ್ತಿಕಲಶವಾಗಿದೆ ಪ್ರಪಂಚದ ಹಿತ, ಚಿಂತನೆಯನ್ನು ಅದು ಅವಲಂಬಿಸಿದೆ. ಯುವಕರಿಗೆ ಅಂದವಾದ, ಮನೋರಂಜಕವಾದ, ಮತ್ತು ವೈಶಾಲ್ಯದಿಂದ ಕೂಡಿದ ವಿದ್ಯಾಭ್ಯಾಸವೇ ಜೀವನದ ಸಂಪದಭ್ಯುದಯ. ಸೃಷ್ಟಿಸಾಮರ್ಥ್ಯವು ಯುವಕರಲ್ಲಿ ಚಲನೆಯನ್ನೂ ಮತ್ತು ವೀರ್ಯವನ್ನೂ ಪಡೆಯುತ್ತದೆ. ಜೀವನದಲ್ಲಿ ಮಾಧುರ್ಯವಿರಬೇಕಾದರೆ—ಪ್ರಪಂಚದ ಯುವಕರು ಸಕಲ ಆಡಳಿತ ಮತ್ತು ಅಧಿಕಾರಗಳಲ್ಲಿ ನಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕು. ಭಾರತದ ಯುವಕರೂ ಕೂಡ ತಮ್ಮ ಭಾಗವನ್ನು ಅದರಲ್ಲಿ ಪಡದೇ ಪಡೆಯುವರು.

## ೧೧ ಅನಂತರೋಕ್ತಿ

## ಯುವಕ ಚಳುವಳಿ ಎತ್ತ ಸಾಗಿದೆ?

ಪ್ರಪಂಚದಲ್ಲಿ ಪ್ರತಿಯೊಂದು ಅಣುವೂ ಸಹ ಮಾರ್ಪಾಡನ್ನು ಹೊಂದಲು ಉತ್ಸಾಹಪೂರಿತವಾಗಿರುವಾಗ ಯುವಕರು ಸುಮ್ಮನೆ ಕೂಡಲಾಗದು. ನವೀನಯುಗವು ಕ್ರಾಂತಿಯುತವಾಗಿದೆ. ಪ್ರತಿ ಕ್ರಿಯೆಯೂ ಕೂಡ ಚಲನಾತ್ಮಕ ಶಕ್ತಿಯಾಗಿ ಮಾರ್ಪಟ್ಟು ಪ್ರಗತಿದಾಯಕವಾದ ಬದಲಾವಣೆಯನ್ನು ಉಂಟುಮಾಡಲು ಸಾಧ್ಯವಾಗುತ್ತದೆ. ಮಾನವನು ಮತ್ತು ಸಮಾಜವು ಸದಾ ಚಲಿಸುತ್ತಲೇ ಇರುತ್ತದೆ. ಆದರೆ ಈಗ ಈ ಚಲನೆಯು ಅತ್ಯಂತ ಸಮ್ಮರ್ದದಿಂದ (Pressure) ವೇಗೋತ್ಕೃಷ್ಟವಾಗಿದೆ. (accelerated)

ಯೌವನವೂ ಮಾನವ ಜೀವನದ ಒಂದು ಮುಖ. ಈ ಜಗತ್ತಿನಲ್ಲಿ ಜೀವನದ ಎಲ್ಲಾ ದೃಷ್ಟಿಗಳೂ ಅಸಂಖ್ಯಾತವಾದ ಮನೋಭಾವನೆಗಳನ್ನು ಪಡೆದಿವೆ. ಜೀವನದ ಪ್ರತಿಯೊಂದು ಭಾಗದಲ್ಲಿಯೂ ಪ್ರಾಮುಖ್ಯತೆಯನ್ನು ಪಡೆಯಲು ಸತ್-ಅಸತ್ ಶಕ್ತಿಗಳು (good and evie) ತಮ್ಮಲ್ಲಿರುವ ಬಲವನ್ನೆಲ್ಲಾ ವಿನಿಯೋಗಿಸುವುವು ಆದರೂ ಅಸತ್ ಶಕ್ತಿಯು ಮಾತ್ರ ನಾಶಕಾರಕವಲ್ಲ. ಏಕೆಂದರೆ ಒಳ್ಳೆಯದನ್ನೂ ಕೆಟ್ಟದ್ದನ್ನೂ ತೀರ್ಮಾನಿಸತಕ್ಕ ನಿರ್ದಿಷ್ಟ ಅಂತಸ್ತುಗಳು. ಅಸಹನೆಯು ಸೃಷ್ಟಿಯೇ ಭೂನರಕ. ಸುಬುದ್ಧಿ, ಸೌಹಾರ್ದತೆ, ಒಳ್ಳೆಯ ನಡತೆ ಇವುಗಳು ಮಾನವನಿಗೆ ಒಂದು ಭೂಷಣ ವನ್ನು ಕೊಡುತ್ತವೆ.

ಜಗತ್ತಿನ ಯುವಕ ಚಳುವಳಿಗಳನ್ನು ನಾಲ್ಕು ಮುಖ್ಯಭಾಗಗಳಾಗಿ ವಿಂಗಡಿಸಬಹುದು:—

೧. ಅಧಿಕಾರದ ಮೋಹವು ವಯೋವೃದ್ಧರ ಪಕ್ಷಪಾತವನ್ನು ವಹಿ ಸಿಲ್ಲ. ಯುವಕರ ಮೇಲೆ ಯಾವ ವಿಧವಾದ ಆಕ್ಷೇಪಣೆಯೂ ಇಲ್ಲ. ಸಾಮ್ರಾಜ್ಯ ಶಾಹಿತ್ವವು ನಡತೆ ಮತ್ತು ನೀತಿಗಳ ಮೇಲೆ ಯಾವ ದೇಶದ ಲ್ಲಿಯೇ ಆಗಲಿ ಮಹತ್ಪರಿಣಾಮವನ್ನು ಉಂಟುಮಾಡಲೇ ಮಾಡುತ್ತದೆ. ಇಂಗ್ಲೆಂಡ್ ಮತ್ತು ಅಮೆರಿಕಾ ದೇಶದ ಯುವಕರು ತಮ್ಮ ದೇಶಗಳಲ್ಲಾ ಗಲೀ ಅಥವಾ ತಮ್ಮ ಅಧೀನದಲ್ಲಿರುವ ಇತರ ದೇಶಗಳಲ್ಲಾಗಲೀ ಸುರಕ್ಷಿತ ವಾದ ಜೀವನ ಯಾತ್ರೆಯನ್ನು ನಡೆಸುತ್ತಾರೆ. ಸರ್ಕಾರದವರು ಪ್ರತಿವರ್ಷವೂ ಕಾರ್ಯತತ್ಪರರಲ್ಲದ ಕೆಲಸಗಾರರನ್ನು ತಮ್ಮ ಆಡಳಿತವರ್ಗಕ್ಕೆ ಸೇರಿಸಿ ಕೊಳ್ಳುತ್ತಾರೆ. ಈ ದೇಶದಲ್ಲಿ ರಾಷ್ಟ್ರೀಯ ಕಾರ್ಯಕ್ರಮಗಳು ಶೀಘ್ರವಾ ಗಿಯೂ ಮತ್ತು ಕಟುತರವಾಗಿಯೂ ಇರುವ ಕೆಲಸಗಳನ್ನು ವ್ಯಾಪಿಸಿಲ್ಲ. ಅಮೇರಿಕಾ ದೇಶದಲ್ಲಿಯೂ ಕೂಡ ಏಕಮಾನವಾಧೀನವಾದ ಕಾರ್ಯಕಲಾ ಪಗಳು (the one-man executive ac'ivities) ಈ ಬೆಳವಣಿಗೆಯನ್ನು ತ್ಯಜಿಸಿಲ್ಲ. ರಾಯಲ್ ಕಮಿಶನ್ ಆಗಲೀ, ಸಾರ್ವಜನಿಕ ಸಂಸ್ಥೆಗಳಾಗಲೀ ಬಹಳ ನಿಧಾನವಾಗಿ ಕೆಲಸ ಮಾಡುತ್ತವೆ. ಈ ದೇಶಗಳಲ್ಲಿ ಅಧಿಕಾರಗಳು ಖಂಡಿತವಾಗಿ ದೊರೆಯುವುದು; ರಕ್ಷಣೆಯಂತೂ ನಿರ್ದಿಷ್ಟವಾದುದು. ಆದರೆ ವಿರಾಮ ಮಾತ್ರ ಹೇರಳವಾಗಿದೆ. ಹೀಗೆ ರಾಷ್ಟ್ರೀಯ ಅಥವಾ ವೈಯಕ್ತಿಕ

ಸಮಸ್ಯೆಯು ವಿರಾಮಕಾಲವನ್ನು ಹೇಗೆ ಸಫಲವಾಗಿ ಕಳೆಯುವುದೆಂಬುದೇ ಆಗಿದೆ. ಕ್ರಾಂತಿಗಳು ಜಯಪ್ರದವಾದಾಗ ಈ ಯುವಕರಿಂದ ಅನುಭವಿಸಲ್ಪಟ್ಟ ರಕ್ಷಣೆಯು ಕಡಮೆಯಾಗುತ್ತದೆ. ಅಲ್ಲದೆ ಅವರು ಕಾರ್ಯಾರಂಭಕ್ಕೆ ಸಿದ್ಧರಾಗಲೇಬೇಕಾಗುವುದು. ಈ ಪರಿವರ್ತನ ಯುಗದಲ್ಲಿ ಯುವಕರು ಕ್ರಾಂತಿಯ ಪಕ್ಷವನ್ನು ವಹಿಸಿಕೊಂಡು, ನವೀನ ಸಮಾಜದ ವಿಷಮ ರಚನೆಯನ್ನು ಅನುಕರಿಸುತ್ತಾರೆ. ರಷ್ಯಾದೇಶದ ಯುವಕರು ಕ್ರಾಂತಿಯ ಪರಿಣಾಮಗಳ ಸ್ಥಿತಿಯನ್ನು ಈಗ ತಾನೇ ಕಳೆದಿದ್ದಾರೆ. ಅವರು ಬ್ರಿಟಿಷ್ ಅಥವಾ ಅಮೆರಿಕದ ಇತಿಹಾಸದ ಪಾಠಗಳನ್ನು ಚಾಚೂ ತಪ್ಪದೆ ಅನುಕರಿಸುತ್ತಾರೆಂದರೆ ಆಶ್ಚರ್ಯವಾಗಲಾರದು.

೨. ಚೀನಾ ದೇಶದ ಯುವಕರು ಬೇರೆ ಬೇರೆ ಗುಣಗಳನ್ನು ವ್ಯಕ್ತಪಡಿಸುತ್ತಾರೆ. ಅವರಿಗೆ ಪ್ರಕೃತಿಮಾತೆಯ ಆಗ್ರಹದಿಂದ ದೈಹಿಕ ದೌರ್ಬಲ್ಯವುಂಟಾಗಿದೆ. ಆಡಳಿತಗಾರರ ಮಹತ್ವಾಕಾಂಕ್ಷೆಯು ನಿರ್ಬಲತೆಯನ್ನು ಮುಂದುವರಿಸುತ್ತದೆ. ದೇಶದ ದುರ್ಬಲ ಸ್ಥಿತಿಯು ಚಳುವಳಿಗಳಿಗೆ ತೌರುಮನೆಯಾಗಿದೆ. ಇದರಿಂದ ಅಂತರಾತ್ಮವು ಪ್ರಚಲಿತವಾಗಿ ಮನೋಭೀಷ್ಟಗಳು ಸಿದ್ಧಿಸುತ್ತವೆ. ಪರಿಪೂರ್ಣತೆಯ ಅರಿವನ್ನೂ ಸ್ಥಾಪಿಸುತ್ತವೆ. ಆದರೆ ಈ ವಾತಾವರಣದಲ್ಲಿಯೇ ಪರಿಪೂರ್ಣತೆಯು ಅಸಾಧ್ಯವಾದ ಗುರಿಯೆಂದು ಗಣಿಸಲ್ಪಡುತ್ತದೆ. ಅದು ಚಲನಾತ್ಮಕ ಶಕ್ತಿಯಾಗುತ್ತದೆಯೇ ಹೊರತು ಸ್ಥಾವರ ಶಕ್ತಿಯಾಗಲಾರದು. ಸೃಷ್ಟಿಯು ಈ ವಾತಾವರಣಗಳಲ್ಲಿಯೇ ಆರೋಗ್ಯಕರವಾಗಿರುತ್ತದೆ. ರಷ್ಯಾ ದೇಶವೂ ಸಹ ಈಗಿನ ಸ್ಥಿತಿಯನ್ನು ಪಡೆಯುವ ತನಕ ಅದೇ ಮಾದರಿಯ ರಾಷ್ಟ್ರವೆನಿಸಿತ್ತು.

೩. ಜರ್ಮನಿ ಇಟಲಿ ಮತ್ತು ಜಪಾನ್ ದೇಶಗಳ ಯುವಕರು ತಮ್ಮ ಸ್ವಭಾವಗಳನ್ನು ರಾಷ್ಟ್ರಕ್ಕೂ, ರಾಷ್ಟ್ರನಾಯಕನಿಗೂ ಸಮರ್ಪಿಸಿದ ಫಲವಾಗಿ, ಅವರು ಅಪವಿತ್ರರಾದಾಗ್ಯೂ ಸಹ ತಮ್ಮ ಬುದ್ಧಿಬಲ, ಶಕ್ತಿ ಸಾಮರ್ಥ್ಯಗಳಿಂದ ಕೂಡಿದ ಸಂಕಲ್ಪವನ್ನು ಮಾಡಿದ್ದಾರೆ. ಹಿಂದಿನ ಮಹಾಯುದ್ಧದ ಆರಂಭದಲ್ಲಿ ಈ ಲಕ್ಷಣಗಳು ಅಭಿವೃದ್ಧಿಹೊಂದಿದವು. ದೈಹಿಕ ಮತ್ತು ನೈತಿಕ ದೌರ್ಬಲ್ಯದಿಂದ ಕೂಡಿದ ಈ ಯುವಕರ ಭವಿಷ್ಯವನ್ನು ಅಂದಾಜು ಮಾಡುವುದು ಬಹಳ ಕಷ್ಟ. ೧೯೧೯ರಲ್ಲಿ ಆದಂತೆ ಒಂದು ಮಹತ್ ಪ್ರತೀ

ಕಾರವು ಉದ್ಭವಿಸಬಹುದು; ಅಥವಾ ಅಭಿಪ್ರಾಯಗಳ ಭಯಂಕರ ಕ್ರಾಂತಿಯುಂಟಾಗಿ ಪರಾಜಿತವಾದ ಪಂಗಡಗಳನ್ನು ಜಗತ್ತಿನ ನೈತಿಕ ಮತ್ತು ಐಹಿಕ ನೇತೃತ್ವಕ್ಕೆ ಒಯ್ಯಬಹುದು.

೪. ಪರರಾಷ್ಟ್ರದ ಆಡಳಿತಕ್ಕೊಳಗಾದ ದೇಶಗಳು ಅಸಾಧಾರಣವಾದ ಸ್ಫೂರ್ತಿಗಳನ್ನು ವ್ಯಕ್ತಪಡಿಸತಕ್ಕ ಮುಂದಾಳುಗಳಿಗೆ ಆಶ್ರಯವನ್ನು ನೀಡುತ್ತವೆ. ಆದರೆ ಚಕ್ರಾಧಿಪತ್ಯದ ಆಳ್ವಿಕೆಯ ಸಿದ್ಧಾಂತ ಮತ್ತು ಪ್ರಯೋಗಗಳಲ್ಲಿ ಆಧುನಿಕ ಆಡಳಿತಗಾರರು ಬಹುಮಟ್ಟಿಗೆ ಮುಂದುವರೆದಿದ್ದಾರೆ. ಇದರ ಪರಿಣಾಮದಿಂದ ಎಲ್ಲೆಲ್ಲಿಯೂ ಪ್ರೀತಿದಾಯಕವಾದ ಆಳ್ವಿಕೆಯು ಲಭಿಸಿದೆ. ಪ್ರಾಯಶಃ ಜಗತ್ತಿನ ಈ ದುಃಖಸ್ಥಿತಿಯಲ್ಲಿ ನಾವು ಗಮನಿಸಬೇಕಾದ ಒಂದು ಮಹತ್ವವಾದ ವಿಷಯವೆಂದರೆ ಜಗತ್ತಿನ ಆಡಳಿತಗಾರರು ತಮ್ಮ ಅಧೀನದಲ್ಲಿರುವ ರಾಷ್ಟ್ರಗಳನ್ನು ಪ್ರಮತ್ತಸ್ಥಿತಿಗೆ ಒಯ್ಯಲು ಸಮರ್ಥರಾಗಿದ್ದಾರೆ. ಈ ಪ್ರಚೋದಿತ ಸ್ಥಿತಿಯಲ್ಲಿ ಪರಾಜಿತರಾದವರು ತಮ್ಮ ಕರ್ತವ್ಯವನ್ನರಿಯದೆ ಜಗತ್ತಿನಲ್ಲಿ ತಮ್ಮ ಹಕ್ಕುಗಳ ಬಗ್ಗೆ ವಿವೇಚನೆಯಿಲ್ಲದವರಾಗಿದ್ದಾರೆ. ವಸ್ತುತಃ ಅವರ ಬುದ್ಧಿಯು ಶೂನ್ಯವೆಂದೇ ಹೇಳಬೇಕು.

ನಾವು ಈ ಸ್ವಪ್ನಾವಸ್ಥೆಯಿಂದ ಬೇಗ ಜಾಗೃತರಾಗಿ ಉನ್ಮತ್ತ ಸ್ಥಿತಿಯಿಂದ ಮುಕ್ತರಾಗಬೇಕಾಗಿದೆ. ನಮ್ಮ ಅಭ್ಯುದಯವೂ, ಮತ್ತು ಜಯವೂ ಅಸಾಧ್ಯವೇನೂ ಅಲ್ಲ. ಏಕೆಂದರೆ ಹಿಂದೆಯೇ ಹೇಳಿದಂತೆ ಆಧುನಿಕ ಸಮಾಜವು ತನ್ನ ಅಸ್ತಿತ್ವದಿಂದ ತೃಪ್ತಿಯನ್ನು ಹೊಂದಿಲ್ಲ. ಅದು ಒಂದು ಮಾರ್ಪಾಡಿಗೆ ಹಾತೊರೆಯುತ್ತಿದೆ.

ಈ ಮಾರ್ಪಾಡು ನಮ್ಮನ್ನು ಉತ್ತಮ ಸ್ಥಿತಿಗೆ ಕರೆದೊಯ್ಯುವಂತೆ ಮಾಡುವುದೇ ನಮ್ಮ ಪ್ರಧಾನ ಕರ್ತವ್ಯ.

# ಅನುಬಂಧ (ಅ)

**ವೈಯಕ್ತಿಕ ಶಕ್ತಿ ಅಥವಾ ಅರ್ಹತೆ**



# ಅನುಬಂಧ (ಆ)

**ಸಾಂಘಿಕ ಶಕ್ತಿ ಅಥವಾ ಅರ್ಹತೆ**

**ಮನುಷ್ಯ**

| | |
|---|---|
| ಬೋಧಕರು | ಸ್ವಯಂಸೇವಕರು |
| ಯೋಚನಾಪರರು | ಕೆಲಸಗಾರರು |
| ಕೆಲಸ | ವಿಶ್ರಾಂತಿ |
| ಆಸ್ಥೆ | ದುಡಿತ |
| ಸಂತೋಷ | ನೋವು |
| ಸ್ವೇಚ್ಛೆ | ಸಾರ್ವಭೌಮತ್ವ |
| ಯೌವನ | ಕಾಲ |
| ಸಂಕ್ಷೋಭ | ತಾಳ್ಮೆ |
| ಕ್ರಾಂತಿ | ಪ್ರತಿಕ್ರಿಯೆ |
| ಔದಾಸೀನ್ಯ | ಸ್ಫೂರ್ತಿ |
| ವ್ಯಕ್ತಿ | ರಾಷ್ಟ್ರ |
| ಕೈಗಾರಿಕೆ | ವ್ಯವಸಾಯ |
| ಸ್ವಾತಂತ್ರ್ಯ | ಪರಸ್ಪರ ಪರಾಧೀನತೆ |
| ಸ್ವಾರ್ಥ | ತ್ಯಾಗ |
| ಅಹಂಭಾವ | ಅನಹಂಭಾವ |




**ಸಮಾಜ**

# ಅನುಬಂಧ (ಇ)

## ಪ್ರಿನ್ಸಿಪಾಲ್ ಅಗರವಾಲ್‌ರವರ ಕಾರ್ಯಕ್ರಮದ ಬಗ್ಗೆ ಒಂದು ಟಿಪ್ಪಣಿ

ಪ್ರಿನ್ಸಿಪಾಲ್ ಅಗರವಾಲ್‌ರವರು ಈಚೆಗೆ ಪ್ರಕಟಿಸಿರುವ ಪುಸ್ತಕದಲ್ಲಿ ವಿದ್ಯಾರ್ಥಿಗಳಿಗೆ ರಚನಾತ್ಮಕ ಕಾರ್ಯಕ್ರಮವೊಂದನ್ನು ಸಂಕ್ಷೇಪವಾಗಿ ರೂಪಿಸಿದ್ದಾರೆ. ಇದು ಮಹಾತ್ಮಾಗಾಂಧೀಜಿ ಮತ್ತು ಬಾಬು ರಾಜೇಂದ್ರ ಪ್ರಸಾದ್‌ರವರ ಎರಡು ಚಿಕ್ಕ ಪುಸ್ತಕಗಳ ಆಧಾರದ ಮೇಲೆ ಬರೆದುದಾಗಿ ರುತ್ತದೆ. ಈ ಸಣ್ಣ ಪುಸ್ತಕದಲ್ಲಿ ವಿವರಿಸಲ್ಪಟ್ಟಿರುವ ಅನೇಕ ನಿರ್ಧಾರಗಳು ಸತಸ್ಸಿದ್ಧವೂ, ಅನಿವಾರ್ಯವೂ ಆಗಿರುತ್ತವೆ. ಅವರು "ಯುವಕರು ರಾಷ್ಟ್ರದ ಸ್ತಂಭಗಳು; ಭಾರತೀಯ ಸ್ವಾತಂತ್ರ್ಯವನ್ನು ಪಡೆಯಲು ಮಾತಿನ ಮರ್ಯಾದೆಯು ಮಾತ್ರ ಸಾಲದು; ಮತ್ತು ಭಾರತೀಯ ಸ್ವಾತಂತ್ರ್ಯ ಸಾಧನೆಗೆ ರಚನಾತ್ಮಕ ಕಾರ್ಯಕ್ರಮದ ಪ್ರಾಮುಖ್ಯತೆಯನ್ನು ಮಿತಿಮೀರಿ ಒತ್ತಿ ಹೇಳಲಾಗುವುದಿಲ್ಲ," ಎಂದು ಅವಲೋಕಿಸುತ್ತಾ ಆರಂಭ ಮಾಡಿರು ತ್ತಾರೆ. ಆರೋಗ್ಯಭಾಗ್ಯ, ಗ್ರಾಮಸೇವೆ, ನಿವಾರಣಾ ಕಾರ್ಯ, ವ್ಯಾಸಂಗ ಗೋಷ್ಠಿ ಮತ್ತು ಸಾಮಾಜಿಕ ಸುಧಾರಣೆಗಳ ಅವಶ್ಯಕತೆಯನ್ನು ಒತ್ತಿ ಹೇಳಿ ದಾಗ ನಾವೂ ಸಹ ಒಪ್ಪಿಕೊಳ್ಳಬೇಕಾಗುತ್ತದೆ.

ಈ ಸಣ್ಣ ಗ್ರಂಥದ ಪ್ರತಿಪುಟದಲ್ಲಿಯೂ, ಬರೆದಿರುವ ಕ್ರಾಂತಿಕಾರಕ ಮತ್ತು ಪೂರ್ವಾಚಾರ ಪದ್ಧತಿಯನ್ನು ಅನುಸರಿಸುವ ವಿಷಯಗಳು ಮೇಲೆ ಹೇಳಿದ ಧಾರಾಳವಾದ ಮತ್ತು ಪ್ರಗತಿಶೀಲವಾದ ಮನೋಭಾವನೆಯನ್ನು ಕುಗ್ಗಿಸುತ್ತವೆ. ಟೀ ಕುಡಿಯುವುದು ಮತ್ತು ಧೂಮಪಾನಗಳು ದುರಭ್ಯಾ ಸಗಳೆಂದು ಹೇಳಿದಾಗಲೂ, ಚಲನಚಿತ್ರಗಳಿಗೆ ಹೋಗುವುದು, ಕಾಲ ವನ್ನೂ ಧನವನ್ನೂ ಮತ್ತು ಆರೋಗ್ಯವನ್ನೂ ನಾಶಮಾಡುತ್ತದೆಂದೂ ಅದು ಕೇವಲ ಕೀಳ್ತರದ ತೃಪ್ತಿಯನ್ನು ಉಂಟುಮಾಡಿ ಸಾಮಾಜಿಕ ನೀತಿಯನ್ನು ಕುಗ್ಗಿಸುತ್ತದೆಂದು ಹೇಳಿದಾಗಲೂ ಅವರು ಪರಿಪೂರ್ಣಜೀವನವನ್ನು ಧಿಕ್ಕರಿಸುತ್ತಾರೆಂದು ಹೇಳಬಹುದು. ಈ ಕೀಳ್ತರದ ತೃಪ್ತಿಗಳಾದರೂ ಏನು? ಸಾಮಾಜಿಕ ನೀತಿಯಾದರೂ ಏನು? ಪಾಶ್ಚಿಮಾತ್ಯ ಸಂಸ್ಕೃತಿಯನ್ನೂ

ಜೀವನವನ್ನೂ ಧಿಕ್ಕರಿಸುವುದು ನಮ್ಮಲ್ಲಿ ವಾಡಿಕೆಯಾಗಿದೆ. ಪ್ರಿನ್ಸಿಪಾಲ್ ಅಗರ್‌ವಾಲರೂ ಕೂಡಾ ಇದನ್ನು ಸಮ್ಮತಿಸಿದ್ದಾರೆ. ಬ್ರಹ್ಮಚರ್ಯ ಮತ್ತು ಆತ್ಮನಿಗ್ರಹ ಇವುಗಳು ಮನುಷ್ಯನನ್ನು ಮತ್ತೊಂದು ವಿಧವಾದ ಅಪಾಯಕರಸ್ಥಿತಿಗೆ ಒಯ್ಯುತ್ತದೆಂಬ ಅರಿವಿದ್ದರೂ ಅವುಗಳು ಅವಶ್ಯಕವೆಂದು ಹೇಳುತ್ತಾರೆ. ಆದರೆ ಆತ್ಮನಿಗ್ರಹಕ್ಕೆ ಅಂತಹ ನಿಯಮಿತ ಜೀವನವೇ ಅತ್ಯಾವಶ್ಯಕವೆಂಬುದನ್ನು ಮರೆತಿದ್ದಾರೆ. ಮತ್ತು ಅವರು ದೊಡ್ಡ ನೀತಿ ಪ್ರಚಾರಕನಂತೆ ನಿಷ್ಕಳಂಕ ಸ್ವಭಾವವನ್ನು ಹೊಂದಬೇಕಾದರೆ ಸ್ತ್ರೀಯರ ವಿಷಯದಲ್ಲಿ ಅತ್ಯಂತ ಸಭ್ಯತೆಯಿಂದ ವರ್ತಿಸಬೇಕೆಂದು ಉಪದೇಶಿಸುತ್ತಾರೆ. ಈ ಅಭಿಪ್ರಾಯಗಳೆಲ್ಲವೂ ಅನುಚಿತವೂ, ಅಸಾಧ್ಯವೂ ಮತ್ತು ಪೂರ್ವಕಾಲದ ಸಂಪ್ರದಾಯಕ್ಕೆ ಸೇರಿದ್ದುವೂ ಆಗಿರುತ್ತವೆ

"ನಾವು ಪಾಶ್ಚಿಮಾತ್ಯರನ್ನು ಅನುಕರಿಸುತ್ತಿದ್ದೇವೆ. ಅನೇಕ ಶತಮಾನಗಳಿಂದ ಪರಕೀಯರ ರೀತಿ ನೀತಿಗಳನ್ನು ಕಲಿಯುತ್ತಿದ್ದೇವೆ. ಈಗಲಾದರೂ ನಮ್ಮ ಉಡುಪಿನಲ್ಲಿಯೂ ಮನೋವಾಕ್ಕಾಯ ಕರ್ಮಗಳಲ್ಲಿಯೂ ಭಾರತೀಯರಾಗಿರೋಣ. ಪಾಶ್ಚಿಮಾತ್ಯ ನಾಗರಿಕತೆಯ ಆಡಂಬರದ ಊರುಗೋಲುಗಳನ್ನು ಕಿತ್ತೆಸೆಯೋಣ; ನಂಬಿಕೆಯಿಂದಲೂ ಆಶೆಯಿಂದಲೂ ನಮ್ಮ ಕಾಲಿನ ಮೇಲೆ ನಾವೇ ನಿಂತುಕೊಳ್ಳೋಣ." ಎಂದು ಅಗರ್‌ವಾಲರವರು ಹೇಳಿದಾಗ ಅವರು ತಮ್ಮ ಸಂಕುಚಿತ ಭಾವನೆಯನ್ನು ಹೊರಗೆಡಹುತ್ತಾರೆ. ಈ ಸಂಕುಚಿತ ಮನೋಭಾವನೆಯೇ ಮುಸ್ಲಿಮರನ್ನು ಪಾಕಿಸ್ಥಾನಕ್ಕೆ ಪ್ರೇರೇಪಿಸುತ್ತದೆ. ಅಲ್ಲದೆ ಅವರು ತಮ್ಮ ಮನೋವಾಕ್ಕಾಯಕರ್ಮಗಳಲ್ಲಿ ಮುಸ್ಲಿಮರೇ ಆಗಬೇಕೆಂದು ಬಯಸುತ್ತಿದ್ದಾರೆ. ಅಗರ್‌ವಾಲ್‌ರವರು ಬಾಹ್ಯಾಡಂಬರಗಳಿಗೆ ಹೆಚ್ಚು ಗಮನಕೊಟ್ಟಿರುವಂತೆ ತೋರುತ್ತದೆ. ಅವರು ಗಮನಿಸಬೇಕಾದುದು ಅದರೊಳಗಿನ ತಿರುಳನ್ನು ಮಾತ್ರ. ಭಾರತೀಯನ ಪರಾಧೀನತೆಯು ಹೇಯವಾದ ಪಾಶ್ಚಾತ್ಯ ಬಾಹ್ಯಾಡಂಬರದ ಅನುಕರಣೆಯಲ್ಲಡಗಿದೆ. ಪಾಶ್ಚಾತ್ಯ ಉಡುಪಿನಲ್ಲಾಗಲೀ ಭಾಷೆಯಲ್ಲಾಗಲಿ ಯಾವ ಕಳಂಕವೂ ಇಲ್ಲವೆಂಬುದನ್ನು ನಾವು ಗಮನಿಸಬೇಕು. ಯಾವ ಭಾರತೀಯನಾದರೂ ಈ ಪಾಶ್ಚಿಮಾತ್ಯ ವೇಷಭೂಷಣಗಳನ್ನು ಅಭ್ಯಾಸಮಾಡಿದರೆ— ಅದನ್ನು ಖಂಡಿಸಲಾಗದು. ಸರಳ ಜೀವನ ಮತ್ತು ಉದಾತ್ತ ಮನೋ

ಭಾವದ ತತ್ವದಲ್ಲಿ ಹೆಚ್ಚು ತಿರುಳಿಲ್ಲವೆಂದು ನಾವು ಮತ್ತೆ ಹೇಳಬಹುದು. ದಾಸ್ಯ ಭಾವನೆಯನ್ನೂ ಪಾರತಂತ್ರ್ಯವನ್ನೂ ನಾವು ನಿಜವಾಗಿಯೂ ಹಳಿಯಬೇಕು. ಈ ಭಾವನೆಯನ್ನು ನಿರ್ಮೂಲಗೊಳಿಸಲು ಅಗರ್‌ವಾಲ್‌ರವರು ಮಾಡಿರುವ ಪ್ರಯತ್ನವು ಅಸಾಧುವಾಗಿಯೂ, ತರ್ಕರಹಿತವಾಗಿಯೂ ಇದೆ. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ಉತ್ತಮವಾದುದನ್ನು ಸ್ವೀಕರಿಸಿ, ಮುಸ್ತಫಾ ಕೆಮಾಲ್ ಅತಾಟುರ್ಕ್ ಎಂಬರಾಜನ ರಾಜ್ಯ ಭಾರದಲ್ಲಿ ತುರ್ಕಿ ದೇಶವು ಮುಂದುವರಿದಿರುವಾಗ, ಪ್ರಾಜ್ಞರಾದ ಅಗರ್‌ವಾಲ್‌ರವರು ಅಲ್ಲಿ ರಾಷ್ಟ್ರೀಯತೆಯ ಅಭಾವವನ್ನು ಕಾಣಲು ಅಸಾಧ್ಯವೆ? ಫ್ಯಾಸಿಸಂ, ಷ್ರಿಂಟೋಯಿಸಂಗಳಿಗೆ ಆಧಾರ ಭೂತವಾದ ಅಸಹನೆಯನ್ನು ಅಗರ್‌ವಾಲ್‌ರವರ ತರ್ಕವು ಹೊರಗೆಡಹುತ್ತದೆ. ಈಗಿನ ಕಾಲದಲ್ಲಿ ಒಂದು ಸಂಸ್ಕೃತಿಗೂ ಇನ್ನೊಂದು ಸಂಸ್ಕೃತಿಗೂಯೋಗ್ಯವಾದ ಸಂಪರ್ಕವಿದ್ದು, ಪರಸ್ಪರ ಬದಲಾವಣೆ ಇರಬೇಕಾದುದು ಅತ್ಯಗತ್ಯವಾಗಿರುವಾಗ ಮೇಲಿನ ದುರಭ್ಯಾಸಕ್ಕೆ ಆಸ್ಪದವಿಲ್ಲ.

ಭಾರತದಲ್ಲಿ ಸಮಾಜದ ಪ್ರಯೋಜನಕಾರಕ ವಸ್ತುಗಳ ವ್ಯವಸ್ಥೆಯ ನಿರ್ಲಕ್ಷ್ಯವೇ ನಮ್ಮ ನಾಯಕರು ಮಾಡುತ್ತಿರುವ ಮಹಾಪರಾಧ. ಆಧುನಿಕ ವಿದ್ಯಾರ್ಥಿಗಳ ನೇತೃತ್ವವನ್ನೂ, ಕಾರ್ಯಕ್ರಮಗಳನ್ನೂ ದ್ರೋಹಮಾಡಲು ಯತ್ನಿಸುತ್ತಿದ್ದಾರೆ. ಕಾರ್ಯತತ್ಪರರಾದ ಕೆಲಸಗಾರರ ವಿಷಯದಲ್ಲಿ ಈ ಔದಾಸೀನ್ಯವನ್ನು ನಮ್ಮ ಶಿಕ್ಷಣ ಶಾಸ್ತ್ರಜ್ಞರೂ ರಾಜಕೀಯ ತತ್ವಜ್ಞರೂ ಮುಂದುವರಿದಿದ್ದೇ ಆದರೆ ಅಥವಾ ಸೇವಾದೀಕ್ಷೆಯನ್ನು ವಹಿಸಲು ಅತ್ಯಂತ ಕಾತುರರಾದ ಯುವಕರನ್ನು ನಿರುತ್ಸಾಹಗೊಳಿಸಿದ್ದೇ ಆದರೆ ನಮ್ಮ ಬಿಡುಗಡೆಯನ್ನು ಅನಿರ್ದಿಷ್ಟಕಾಲದವರೆಗೂ ವಿಳಂಬಮಾಡಿದಂತಾಗುವುದು.

# ಅನುಬಂಧ ಈ

## ಮಹಾತ್ಮಾ ಗಾಂಧೀಜಿ ಮತ್ತು ವಿದ್ಯಾರ್ಥಿಗಳು

ರಚನಾತ್ಮಕ ಕಾರ್ಯಕ್ರಮವು ಪೂರ್ಣ ಸ್ವರಾಜ್ಯವನ್ನು ಪಡೆಯುವುದಕ್ಕೆ ಸತ್ಯವಾದ ಮತ್ತು ಅಹಿಂಸಾತ್ಮಕವಾದ ಮಾರ್ಗ—ಎಂಬುದಾಗಿ ಮಹಾತ್ಮಾ ಗಾಂಧೀಯವರು ತಮ್ಮ ಪುಸ್ತಕದಲ್ಲಿ ಬರೆದಿದ್ದಾರೆ. ಆದ್ದರಿಂದ

ಆ ವಿಷಯಗಳನ್ನು ನಾವಿಲ್ಲಿ ಪರಿಶೀಲಿಸುವುದು ಸೂಕ್ತವಾಗಿದೆ. ಅವರು ಕೆಲಸಗಾರರಿಗೆ ಹೇಳಿರುವ ವಿವಿಧ ಕಾರ್ಯಕ್ರಮಗಳ ಪ್ರಾಮುಖ್ಯತೆಯನ್ನು ಯಾರೂ ಅಲ್ಲಗಳೆಯುವಂತಿಲ್ಲ. ದೈನಂದಿನ ಕಾರ್ಯಕಲಾಪಗಳ ವಿವಿಧ ರೀತಿಗಳನ್ನು ಒಪ್ಪಬೇಕಾದುದು ಸರಿ. ಆದರೆ ಕೆಲವು ವಿಷಯಗಳು ಶೀಘ್ರ ವಾಗಿ ತಿದ್ದುಪಡಿ ಹೊಂದಬೇಕಾಗಿವೆ. ನಮ್ಮ ವಿಷಯಕ್ಕೆ ಅವುಗಳನ್ನು ಅನ್ವಯಿಸಿಕೊಳ್ಳಬೇಕಾದರೆ ವಿದ್ಯಾರ್ಥಿಗಳಿಗೆ ಅವರು ಸೂಚಿಸಿರುವ ವಿಷಯ ಗಳನ್ನು ಮಾತ್ರ ಗಮನಿಸಬಹುದು. ಪರಕೀಯ ಭಾಷೆಯ ಮೇಲೆ ಮಹಾತ್ಮಾ ಜೀಯವರಿಗೆ ಇರುವ ಆಗ್ರಹವೂ, ಅವರ ಸಹನೆ ತ್ಯಾಗ ಮತ್ತು ಪ್ರಾಮಾ ಣಿಕತೆ—ಇವುಗಳಲ್ಲಿರುವ ಪ್ರಾಮುಖ್ಯತೆಯೂ ಉತ್ತಮ ಜೀವನಕ್ಕೆ ಸಹ ಕಾರಿಗಳಾಗಿವೆ.

ಆದರೆ ಪಕ್ಷೀಯ ರಾಜಕೀಯ ಮುಷ್ಕರಗಳೂ ಮತ್ತು ನಡತೆ ಇವುಗಳ ವಿಷಯವಾಗಿ ಅವರ ಅಭಿಪ್ರಾಯಗಳು ಸ್ವಲ್ಪ ವಿಚಿತ್ರವಾಗಿವೆ. ವಿದ್ಯಾರ್ಥಿ ಗಳಿಗೆ ನಡತೆಯ ವಿಷಯದಲ್ಲಿ ಪ್ರಥಮ ನಿಯಮ ಯಾವುವೆಂದರೆ (ಅವರ ಮಾತಿನ ಪ್ರಕಾರ)— "ವಿದ್ಯಾರ್ಥಿಗಳು ಪಕ್ಷೀಯ ರಾಜಕೀಯಕ್ಕೆ ಪ್ರವೇಶಿ ಸಬಾರದು. ಅವರು ಕೇವಲ ವಿದ್ಯಾರ್ಥಿಗಳು; ಸಂಶೋಧಕರು. ರಾಜ ಕೀಯ ತತ್ವಜ್ಞರಲ್ಲ." ಇದರ ಅರ್ಥವೇನು ? ಅಂದರೆ ರಾಜಕೀಯ ತತ್ವ ಜ್ಞರು ವಿದ್ಯಾರ್ಥಿಗಳಾಗಿಯೂ ಸಂಶೋಧಕರಾಗಿಯೂ ಇರಕೂಡದೆ ? ಪಕ್ಷೀಯ ರಾಜಕೀಯಕ್ಕೆ ಅವರು ಅಂಧಾನುಕರಣ ಮಾಡಬೇಕೆ ? ಮಹಾ ತ್ಮಾಜೀಯವರು ವಿದ್ಯಾರ್ಥಿಗಳನ್ನು ರಾಜಕೀಯ ತತ್ವಜ್ಞರಾಗಿರಕೂಡದೆಂದು ಹೇಳುವಾಗ ಭಾರತೀಯ ಜೀವನದ ಒಂದು ಸಾಮಾನ್ಯ ದೌರ್ಬಲ್ಯವನ್ನು ಒತ್ತಿ ಹೇಳುತ್ತಿದ್ದಾರೆ. ನಮ್ಮ ದೇಶದಲ್ಲಿ ಇರವ ಹಿರಿಯನಾಯಕರೆಲ್ಲರೂ "ಯುವಕರು ವಿಮರ್ಶಾಜ್ಞಾನದಲ್ಲಿ ಪರಿಣತರಲ್ಲ. ಮತ್ತು ಸರಿಯಾದ ಮಾರ್ಗದಲ್ಲಿ ಮುಂದುವರಿಯಲು ಶಕ್ತರಲ್ಲ." ಎಂಬುದಾಗಿ ಯೋಚಿಸುವುದು ಸಹಜವಾಗಿಯೇ ಇದೆ.

ಮುಷ್ಕರಗಳು ತ್ಯಾಗಬುದ್ಧಿಯಿಂದ ಪ್ರೇರೇಪಿಸಲ್ಪಟ್ಟ ಒಬ್ಬ ನಾಯ ಕನ ಕೈಯಲ್ಲಿರುವ ಆಯುಧಗಳೆಂದು ನಾವು ಹೇಳಬಹುದು. ಅಲ್ಲದೆ ಪ್ರತಿ ನಿತ್ಯದ ಕಾರ್ಯವನ್ನು ಬಿಟ್ಟು ಸುಮ್ಮನಿರುವುದು—ಎಂಬ ದೃಷ್ಟಿಯಿಂದ

ನೋಡಿದರೆ, ಮುಷ್ಕರವು ಸ್ಫೂರ್ತಿ, ಸಂತೋಷ, ದುಃಖ ಅಥವಾ ಗೌರವ— ಇವುಗಳ ಸೂಚನೆಯೆಂದು ಹೇಳಬಹುದು. ಒಂದು ಮುಖ್ಯ ವಿಷಯವನ್ನು ನಾವು ಇಲ್ಲಿ ಗಮನಿಸಬಹುದು. ಅದೇನೆಂದರೆ— ಒಬ್ಬ ವಿದ್ಯಾರ್ಥಿಯು ಅನ್ಯಾಯದ ಮೇಲೆ ತಿರುಗಿಬಿದ್ದಾಗ, ಮುಷ್ಕರವನ್ನು ಮುಂದುವರಿಸುವ ದಾಗಲೀ, ಇನ್ನೇನಾದರೂ ಆಗಲಿ, ತನ್ನ ಕೈಲಾದದ್ದನ್ನೆಲ್ಲಾ ಮಾಡಬೇಕು. ಆದ್ದರಿಂದ ಮುಷ್ಕರದ ನಾಯಕರು ಮತ್ತು ಶಾಲೆಯ ಅಧ್ಯಕ್ಷರು ಒಪ್ಪಿದ ಮೇಲೆ ಮಾತ್ರ ಮುಷ್ಕರವನ್ನು ಆರಂಭಿಸಬೇಕು ಎಂಬ ಈ ಅಭಿಪ್ರಾಯ ವನ್ನು ನಾವು ಅನುಮೋದಿಸಲಾರೆವು. ಇನ್ನೊಬ್ಬರ ಕಾರ್ಯಕಲಾಪಗಳಿಗೆ ಅಡಚಣೆಯುಂಟಾಗದ ಹಾಗೆ ಒಬ್ಬನು ಅತ್ಯಂತ ಸ್ಫೂರ್ತಿಗೊಂಡು, ಒಂದು ವೇಳೆ ಸಂಧಾನದ ಸಮಯ ಬಂದಾಗ ತನ್ನ ಮುಷ್ಕರವನ್ನು ಮುಂದುವರಿಸ ಬಹುದು.

“ತಮ್ಮೊಡನೆ ಸಹಪಾಠಿಗಳಾಗಿರುವ ವಿದ್ಯಾರ್ಥಿನಿಯರ ವಿಷಯದಲ್ಲಿ ಅತ್ಯಂತ ಪರಿಶುದ್ಧರಾಗಿಯೂ, ಕೆಚ್ಚಿನ ಮರ್ಯಾದೆಯುಳ್ಳವರಾಗಿಯೂ ಇರುತ್ತಾರೆ.” ಎಂಬುದೇ ಅವರ ಕಡೆ ನುಡಿ. ಈ ಹೇಳಿಕೆಯಲ್ಲಿರುವ ಪರಿ ಶುದ್ಧತೆ ಮತ್ತು ಕೆಚ್ಚಿನ ಮರ್ಯಾದೆ ಎಂಬ ಪದಗಳಿಗೆ ಸರಿಯಾದ ಅರ್ಥ ವನ್ನೂ ವಿವರಣೆಯನ್ನೂ ಕೊಟ್ಟಿದ್ದ ಪಕ್ಷದಲ್ಲಿ ಈ ಹೇಳಿಕೆಯು ಜಾಣ್ಮೆ ಯಿಂದ ಕೂಡಿದುದಾಗಿತ್ತೆಂದು ಹೇಳಬಹುದು. ಈ ವಿಷಯವಾಗಿ ಪ್ರಿನ್ಸಿ ಪಾಲ್ ಅಗರವಾಲ್‌ರವರ ವಾದವನ್ನೇ ಮುಂದಿಡುವುದಾದರೆ, ನಾವು ಬೇರೊಂದೆಡೆ ಅದನ್ನು ವಿವರಿಸಿದ್ದೇವೆಂದು ಹೇಳಬೇಕಾಗಿದೆ. ಪ್ರಾಚೀನ ಸಂಪ್ರದಾಯಗಳಿಗೆ ಕಟ್ಟುಬೀಳದಿರುವ ಇಂತಹ ಮಹಾತ್ಮರೂ ಸಹ ಹೀಗೆ ಹೇಳಿರುವುದು ತುಂಬಾ ಆಶ್ಚರ್ಯಕರವಾಗಿದೆ.

# ಅನುಬಂಧ (ಉ)

## ಭಾರತೀಯ ಸ್ವಾತಂತ್ರ್ಯ ಸಂಘ

ಭಾರತೀಯ ಸ್ವಾತಂತ್ರ್ಯ ಸಂಘದ ರಚನೆ ಮತ್ತು ಬೆಳವಣಿಗೆಗಳಿಂದ ನಾವು ಕಲಿಯಬೇಕಾದ ಅನೇಕ ವಿಷಯಗಳಿವೆ. ಇಲ್ಲಿ ನಾವು ಕೆಲವನ್ನು ಗಮನಿಸೋಣ—

ಭಾರತೀಯರು ಬರ್ಮ ಮತ್ತು ಮಲಯಗಳಲ್ಲಿ ಸಾಮ್ರಾಜ್ಯಶಾಹಿತ್ವವನ್ನು ಎದುರಿಸಲು ಹೋರಾಟ ನಡೆಸಿದ ಒಂದು ಕೆಚ್ಚೆದೆಯ ಸಾಹಸದಿಂದಲೇ ಸ್ಫೂರ್ತಿಯು ಉದ್ಭವಿಸಿತು. ಆದರೆ ಇದು “ **ನಂಬಿಕೆ, ಐಕಮತ್ಯ ಮತ್ತು ತ್ಯಾಗ** ” ಎಂಬ ಆದರ್ಶವಾಣಿಗಳಿಗೆ ಸಮ್ಮತಿ ಕೊಟ್ಟಾಗಂತೂ ಕೀರ್ತಿಯು ಇಮ್ಮಡಿಸಿತು.

ಕೇವಲ ಮೂರು ವರ್ಷಗಳಿಗಿಂತಲೂ ಕಡಿಮೆ ಕಾಲದಲ್ಲಿ ಅವರಿಂದ ಸಾಧಿಸಲ್ಪಟ್ಟ ನಂಬಲೂ ಸಹ ಸಾಧ್ಯವಾಗದ ಸಾಹಸ ಕೃತ್ಯಗಳನ್ನು ನಾವಿಲ್ಲಿ ಗಮನಿಸಬೇಕಾಗಿದೆ.

ಬ್ರಿಟಿಷ್ ಸೈನಿಕರು ಬರ್ಮವನ್ನು ಮುತ್ತಿದಾಗ—೧೯೪೫ನೇ ಇಸ್ವಿ ಫೆಬ್ರುವರಿ ೧೪ನೇ ತಾರೀಖಿನಿಂದ ಅವರು ರಂಗೂನಿನಲ್ಲಿ ನೆಲೆಸಿದ ಕಾಲದ ವರೆಗೂ ಅಂದರೆ ೧೯೪೫ನೇ ಇಸ್ವಿ ಮೇ ತಿಂಗಳು ೪ನೇ ತಾರೀಖಿನ ವರೆಗೂ, ಈ ಸ್ವಾತಂತ್ರ್ಯ ಸಂಘದವರು ಸಾಧಿಸಿದ ಆಶ್ಚರ್ಯಕರವಾದ ಹಲವು ಸಂಗತಿಗಳನ್ನು ಇಲ್ಲಿ ನೋಡೋಣ—

ಭಾರತೀಯ ಸ್ವಾತಂತ್ರ್ಯ ಸಂಘ:—ಇದು ಬರ್ಮಾದಲ್ಲಿ ನೂರು ಶಾಖೆಗಳನ್ನೂ, ಮಲಯದಲ್ಲಿ ಎಪ್ಪತ್ತು ಶಾಖೆಗಳನ್ನೂ, ಥೈಲ್ಯಾಂಡಿನಲ್ಲಿ ೩೪ ಶಾಖೆಗಳನ್ನೂ ಮತ್ತು ಅಂದಮಾನ್, ಜಾವ, ಸುಮಾತ್ರ, ಚೀನ, ಜಪಾನ್, ಮಂಚೂರಿಯ, ಸೆಲೆಬಸ್, ಬೋರ್ನಿಯೋ ಮತ್ತು ಫಿಲಿಫೈನ್ ಇವುಗಳಲ್ಲಿ ಹಲವು ಶಾಖೆಗಳನ್ನೂ ಹೊಂದಿದ್ದಿತು.

ಅಲ್ಲಿ ಆಸ್ಪತ್ರೆಗಳೂ, ಚಿಕಿತ್ಸಾಲಯಗಳೂ ಇದ್ದವು. ಈ ಸಂಸ್ಥೆಯು ವೈದ್ಯರನ್ನೂ ಹಲವು ನಿವಾರಣಾ ಕೇಂದ್ರಗಳನ್ನೂ ನೇಮಿಸಿತು. ಅಲ್ಲಿ ಅನೇಕ ರಾಷ್ಟ್ರೀಯ ಶಾಲೆಗಳಿದ್ದವು. ಬರ್ಮಾದಲ್ಲಿ ಮಾತ್ರವೇ ಅರವತ್ತೈದು ರಾಷ್ಟ್ರೀಯ ಶಾಲೆಗಳಿದ್ದವು. ಆಜಾದ್‌ಹಿಂದ್ ಸರ್ಕಾರವು ಕಾರಭಾರ ನಡಸುತ್ತಿದ್ದ ೧೯ ಇಲಾಖೆಗಳು ಈ ಸಂಘದಲ್ಲಿದ್ದವು.

## ಆಜಾದ್‌ಹಿಂದ್ ಸರ್ಕಾರ

**(Civil) ಪ್ರಜಾಶಾಖೆ**

೧. ನಾಲ್ಕು ಆಕಾಶವಾಣಿ ಕೇಂದ್ರಗಳು.

೨. ಎರಡು ಪತ್ರಿಕೆಗಳು:—“ ಆಜಾದ್‌ಹಿಂದ್”
ಮತ್ತು “ ಪೂರ್ಣ ಸ್ವರಾಜ್ಯ.”

೩. ಪ್ರಜಾಡಳಿತದ ಸಹಾಯಕ್ಕಾಗಿ ಒಂದು
“ ಆಜಾದ್‌ಹಿಂದ್ ” ಸೈನ್ಯ.

೪. “ ಆಜಾದ್‌ಹಿಂದ್ ಬ್ಯಾಂಕ್ ”

**( Military ) ಸೈನಿಕ ಖಾತೆ**

೧. ಸಿಂಗಪುರ ಮತ್ತು ರಂಗೂನ ನಗರಗಳಲ್ಲಿ ಅಧಿಕಾರಿಗಳ ಶಿಕ್ಷಣ ಶಾಲೆಗಳು.

೨. ಬಹದ್ದೂರ್ ಮಂಡಲ— ( ಗೂಢಚಾರ, ಸಸ್ಯಗಳ ನಾಶ, ಪ್ರಚಾರ ಕಾರ್ಯ ಇವುಗಳಿಗಾಗಿ ಒಂದು ಸೈನ್ಯ. )

೩. ಝಾನ್ಸಿರಾಣಿ ಸೈನ್ಯ.

೪. ಭಾರತೀಯ ರಾಷ್ಟ್ರೀಯ ಸೈನ್ಯ ( I. N. A. )
ಇವುಗಳ ಅಂಗಗಳು.

(ಅ) ಪ್ರಧಾನ ಕಛೇರಿ.

(ಆ) ಹಿಂದುಸ್ಥಾನ ಕ್ಷೇತ್ರದಳ.

(ಇ) “ ಷೇರ್‌ದಿಲ್ ”– ಬೆಟ್ಟಗುಡ್ಡಗಳಲ್ಲಿ ಹೋರಾಡುವ ದಳ.

(ಈ) ಗುಪ್ತಚಾರರ ಪಡೆ.

(ಉ) ಸಹಾಯಕ ಸೈನ್ಯ ಮಂಡಲ.

ಪ್ರತಿಯೊಂದು ಕ್ಷೇತ್ರದಳವೂ ಈ ರೀತಿ ಉಪವಿಭಜನೆಯನ್ನು ಪಡೆದಿತ್ತು.

೧. ಕಾಲಾಳು.

೨. **A. F. V.** ಪಡೆ

೩. ಭಾರವಾದ ಬಂದೂಕುಗಳ ಪಡೆ.

೪. ಇಂಜನೀಯರಿಂಗ್ ಕಂಪನಿ.

೫. ವೈದ್ಯರ ಪಡೆ.

ಈ ಸಂಕ್ಷಿಪ್ತ ವಿವರಣೆಯು, ಪೂರ್ವ ಏಷ್ಯಾದಲ್ಲಿ ಭಾರತೀಯರಿಂದ ನಡೆಸಲ್ಪಟ್ಟ ಆಡಳಿತ ಮತ್ತು ಸರಕಾರಗಳ ಸಾದ್ಯಂತ ಸಂಸ್ಥಾಪನೆಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ.

ಈ ಸಂಸ್ಥೆಯಂತೂ ಎಲ್ಲೂ ಇಲ್ಲದ ಶಿಸ್ತನ್ನೂ, ಶ್ಲಾಘನೀಯವಾದ ತ್ಯಾಗ ಬುದ್ಧಿಯನ್ನೂ ಪಡೆದು, ನಮ್ಮ ಜನರ ಅಮರವಾದ ನೀತಿಯನ್ನೂ ಕೀರ್ತಿಯನ್ನೂ ಬೆಳಗಿತು. ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕಾದರೆ ಸೈನಿಕ ರಲ್ಲಿ ಇರಬೇಕಾದ ಗುಣಗಳನ್ನು ಯಾರು ಹರಿಪುರಾ ಕಾಂಗ್ರೆಸ್ ಅಧಿವೇಶನ ದಲ್ಲಿ ವಿವರಿಸಿದರೋ, ಆ ಸುಭಾಷ್‌ಚಂದ್ರ ಬೋಸರೇ ಈ ರೀತಿಯಾಗಿ ನಮ್ಮ ಮುಂದೆ ಬಂದು ರೂಪನ್ನು ಕೊಟ್ಟು, ಸೈನ್ಯವನ್ನು ಕಟ್ಟಿ ನಮ್ಮೆಲ್ಲರಿಗೂ ಮೇಲ್ಪಙ್ತಿ ಹಾಕಿಕೊಟ್ಟವರು.

ನಾವು ಒಂದು ವಿಧವಾದ ತ್ಯಾಗಬುದ್ಧಿಯಿಂದ ಸ್ಫೂರ್ತಿಗೊಂಡು, ಶಿಸ್ತು ಪಡೆದ ಈ ಚಲನಾತ್ಮಕ ಸಂಸ್ಥೆಗೆ ಅನುಗುಣವಾದ ಶಿಕ್ಷಣವನ್ನು ಪಡೆ ದದ್ದೇ ಆದರೆ, ಸ್ವಾತಂತ್ರ್ಯವೂ, ನ್ಯಾಯವೂ ದೂರವಾಗಲಾರದು.